# NITIMANJARI

## (Part II)

---

# ನೀತಿಮಂಜರಿ

## (ದ್ವಿತೀಯ ಭಾಗಂ)

---

BY

PRAKTANA VIMARSA VICHAKSHANA

RAO BAHADUR

R. NARASIMHACHARYA, M.A., M.R.A.S.

*Honorary Correspondent of the Government of India*

*Archaeological Department*

*Late Director of Archaeological Researches in Mysore.*

Second Edition.

ದಿ ಪವರ್ ಪ್ರಿಂಟಿಂಗ್ ವರ್ಕ್ಸ್, ಚಿಕ್ಕಪೇಟೆ, ಬೆಂಗಳೂರು ಸಿಟಿ.

೧೯೩೪.

 [PRICE 12 AS.

*Dedicated*

*By Gracious Permission*

*to*

*His Highness*

*Sir Sri Krishna Raja Odeyar Bahadur*

*G.C.S I.,G.B.E.,*

*Maharaja of Mysore.*

---

ಈ ಗ್ರಂಥವು

ಮೈಸೂರು ಸಂಸ್ಥಾನದ ಮಹಾ ಪ್ರಭುಗಳಾದ

**ಶ್ರೀ ಕೃಷ್ಣರಾಜ ಒಡೆಯರ್ ಬಹಾದುರ್**

ಜಿ. ಸಿ. ಎಸ್. ಐ., ಜಿ. ಬಿ. ಇ.,

ಮಹಾ ಸ್ವಾಮಿಯವರಿಗೆ

ಅಪ್ಪಣೆಯನ್ನು ಪಡೆದು

ಅರ್ಪಿಸಲ್ಪಟ್ಟಿದೆ.

---

## Note to the Second Edition.

---

The copies of the First Edition having been exhausted, this edition has been brought out to meet the constant demand for the book. It is for the most part a reprint of the previous edition, only a few slight changes being made here and there.

I have to express my humble gratitude to H. H. The Maharaja of Mysore for graciously permitting the dedication of this work to him.

*Bangalore*
*15-5-1928.*

R. NARASIMHACHARYA.

# Preface to the First Edition

As far back as 1898, in my Note to the second edition of PART I of **Nitimanjari**, I expressed my intention of giving in PART II of the work a metrical version in Kannada of portions of the most celebrated ethical work in Tamil—the Kural of Tiruvalluvar. But, owing to a variety of circumstances which prevented me from undertaking the work, the intention has long remained unfulfilled. I am therefore thankful that I have now been able to carry out my intention and thus do a little service to the Kannadigas by giving them an idea, however imperfect, of the unique merit and beauty of one of the masterpieces of Tamil literature.

Tiruvalluvar, the author of the Kural, is supposed to have been a Panchama by caste and to have flourished in the 2nd century A.D. He occupies the foremost place as a moralist in Southern India and is "the venerated sage and lawgiver of the Tamil people." His work has been translated not only into English but also into Latin, German, French and Italian. Some scholars are even of opinion that there is no treatise equal to it in any Indian language. Several orientalists have spoken in very high terms of the merits of this work. I give below a few of their remarks :—

The masterpiece of Tamil literature—one of the highest and purest expressions of human thought. That which above all is wonderful in the Kural is the fact that its author addresses himself, without regard to castes, peoples or beliefs, to the whole community of mankind; that he proclaims in their very essence, in their eternal abstractedness, virtue and truth; that he is equally perfect in thought, in language and in poetry, in the austere metaphysical contemplation of the great mysteries of the Divine Nature, as in the easy and graceful analysis of the tenderest emotions of the heart.—*Ariel.*

That admirable collection of stanzas in the Tamil language, which is instinct with the purest and most elevated religious emotion.—*Barth.*

The work is superior to the Institutes of Manu and is worthy of the divine Plato himself.—*Bower*

Tiruvalluvar's poem is one of the select number of great works which have entered into the very soul of a whole people, and which can never die. Especially of Tiruvalluvar it may be said, as Archbishop Trench says of S. Augustine: "He abounds in short and memorable, and, if I might so call them, epigrammatic sayings, concentrating with a forceful brevity the whole truth which he desires to impart into some single phrase, forging it

into a polished shaft, at once pointed to pierce, and barbed that it shall not lightly drop from, the mind and memory.—*Pope.*

The universally acknowledged masterpiece of South Indian genius.—*Fraser.*

The Kural is so called because it is composed in the shortest of Tamil metres named *kural* (short), consisting of two lines, the first containing four feet and the second three. The work contains 133 chapters of 10 couplets each, and is divided into three parts treating of virtue, wealth and love. The couplets, which are the choicest of moral epigrams, are remarkable for their brevity and pithiness. As Dr. Pope says, each is truly "an apple of gold in a network of silver." The marvellous pithiness of the couplets is thus described by two of the early Tamil poets, Paranar and Idaikkadar :—

"As Vishnu, becoming a dwarf (kural), measured heaven and earth with two steps, so with the two lines of his kural (short) verse has Tiruvalluvar measured the universe."

"The couplets are like a semi-perforated mustard seed into which the contents of all the seven seas have been poured."

Of the 133 chapters of the Kural, 4 are introductory, 34 treat of domestic and ascetic virtue, 70 of

wealth, and 25 of concealed and wedded love. The part dealing with wealth has four sections, *viz.*, Royalty, Ministers of State, Essentials of a State and Morality, affirmative and negative. From this mine of ethical rules I have selected only a few gems, 38 chapters—2 from the introductory portion, 26 from part I treating of virtue and 10 from part II treating of wealth—for rendering into Kannada verse. The verses are written, as in Part I of **Nitimanjari**, in old Kannada, and, as far as possible, in the chaste style of early Jaina poets. The archaic letters r (ಱ) and l (ೞ), which are of great value from a philological point of view and are even now in use in several of the Dravidian languages, have been introduced in order to make the Kannadigas, who have lost these letters, familiar with them at least in poetical literature. All difficult words are explained in the Notes at the end of the work.

It only remains for me to express the hope that these verses will be read as widely by the Kannadigas, to whom they are offered as a humble tribute by one who knows a little of both Kannada and Tamil, as their originals are by the Tamilians.

R. NARASIMHACHARYA.

*Bangalore,*
23—10—1911.

ದ್ವಿತೀಯ ಮುದ್ರಣ.

# ಸೂಚನೆ.



ಪ್ರಥಮ ಮುದ್ರಣದ ಪ್ರತಿಗಳೆಲ್ಲಾ ಮುಗಿದುಹೋದುದರಿಂದಲೂ ಪುಸ್ತಕವನ್ನು ಹಲವರು ಅಪೇಕ್ಷಿಸುವುದರಿಂದಲೂ ಈ ಗ್ರಂಥವನ್ನು ಪುನಃ ಮುದ್ರಿಸಲಾಯಿತು. ಹಿಂದಣ ಮುದ್ರಣಕ್ಕೂ ಇದಕ್ಕೂ ಪ್ರಾಯಿಕವಾಗಿ ಹೆಚ್ಚು ವ್ಯತ್ಯಾಸಗಳಿಲ್ಲ: ಎಲ್ಲಿಯೋ ಒಂದೆರಡು ಕಡೆ ಮಾತ್ರ ಸ್ವಲ್ಪ ಮಾರುಪಾಡು ಆಗಿದೆ.

ಈ ಗ್ರಂಥವನ್ನು ತಮಗೆ ಅರ್ಪಿಸಲು ಅಪ್ಪಣೆಯನ್ನು ದಯೆಪಾಲಿಸಿದುದಕ್ಕಾಗಿ ಶ್ರೀಮನ್ಮಹಾರಾಜರವರಿಗೆ ನನ್ನ ಕೃತಜ್ಞತೆಯನ್ನು ನಮ್ರಭಾವದಿಂದ ತಿಳಿಸುತ್ತೇನೆ.

ಬೆಂಗಳೂರು,
೧೫—೫—೧೯೨೮.

ರಾ. ನರಸಿಂಹಾಚಾರ್ಯ.

# ಪ್ರಥಮ ಮುದ್ರಣ.

# ಪೀಠಿಕೆ.

ಹಲವು ವರ್ಷಗಳಿಗೆ ಹಿಂದೆಯೇ—ಎಂದರೆ 1898 ರಲ್ಲಿ, ನೀತಿ ಮಂಜರಿಯ ಪ್ರಥಮಭಾಗದ ದ್ವಿತೀಯಮುದ್ರಣದ ಪೀಠಿಕೆಯಲ್ಲಿ, "ನೀತಿಮಂಜರಿಯ ದ್ವಿತೀಯಭಾಗದಲ್ಲಿ ತಿರುವಳ್ಳುವರಿಂದ ರಚಿತವಾದ ಕುಱಳೆಂಬ ಪ್ರಸಿದ್ಧವಾದ ನೀತಿಗ್ರಂಥದ ಕೆಲವು ಭಾಗಗಳನ್ನು ಕನ್ನಡಕ್ಕೆ ಪದ್ಯರೂಪವಾಗಿ ಪರಿವರ್ತನೆಮಾಡಬೇಕೆಂದಿದ್ದೇನೆ" ಎಂದು ನನ್ನ ಮನೋರಥವನ್ನು ಸೂಚಿಸಿದ್ದೆನು. ಆದರೆ ಹಲವು ವಿಧವಾದ ಪ್ರತಿಬಂಧಕಗಳಿಂದ ಈ ಕಾರ್ಯವನ್ನು ಕೈಕೊಳ್ಳಲು ಅವಕಾಶವು ದೊರೆಯದೆ ನನ್ನ ಮನೋರಥವು ಬಹಳಕಾಲದವರೆಗೆ ಪೂರ್ತಿಯಾಗದೆ ಇದ್ದಿತು. ಈಗ ಆ ಮನೋರಥವು ನೆರವೇರಿ ತದ್ದ್ವಾರಾ ತಮಿಳಿನಲ್ಲಿ ಉತ್ತಮ ಗ್ರಂಥವಾದ ಕುಱಳಿನ ಅಸದೃಶವಾದ ಸೌಂದರ್ಯವನ್ನೂ ಸ್ವಾರಸ್ಯವನ್ನೂ ಸ್ವಲ್ಪಮಟ್ಟಿಗಾದರೂ ಅನುಭವಿಸಿ ಆನಂದಿಸುವಂತೆ ಕನ್ನಡಿಗರಿಗೆ ಈ ಅಲ್ಪವಾದ ಸೇವೆಯನ್ನು ಮಾಡುವ ಭಾಗ್ಯವು ದೊರೆತುದಕ್ಕಾಗಿ ಬಹಳ ಸಂತೋಷಿಸುತ್ತೇನೆ.

ತಿರುವಳ್ಳುವ ಕವಿಯ ಜನ್ಮಸ್ಥಳವು ಮದರಾಸಿಗೆ ಸಮೀಪದಲ್ಲಿರುವ ಮಯಿಲಾಪುರವು. ಆತನು ಜಾತಿಯಲ್ಲಿ ಪಂಚಮನೆಂದೂ ವೃತ್ತಿಯಲ್ಲಿ ನೆಯ್ಗೆಯವನೆಂದೂ ಹೇಳುತ್ತಾರೆ. ಅವನ ಕಾಲವು ಕ್ರಿಸ್ತಶಕದ ಎರಡನೆಯ ಶತಮಾನವೆಂದು ಕೆಲವರು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಈ ಕವಿ ದಕ್ಷಿಣ ಹಿಂದುಸ್ಥಾನದಲ್ಲಿಯ ನೀತಿಗ್ರಂಥಕಾರರಲ್ಲಿ ಅಗ್ರಗಣ್ಯನೆಂದು ಭಾವಿಸಲ್ಪಟ್ಟಿದ್ದಾನೆ. ತಮಿಳರು ಈತನನ್ನು ಋಷಿಯೆಂದೂ ಸ್ಮೃತಿಕಾರನೆಂದೂ ಭಾವಿಸುವ

ದಲ್ಲದೆ ಆದಿಕವಿ, ಮಹಾಜ್ಞಾನಿ, ದೇವಕವಿ ಎಂಬ ಬಿರುದುಗಳನ್ನೂ ಕೊಟ್ಟು ಗೌರವಿಸಿದ್ದಾರೆ. ಇವನಿಂದ ರಚಿತವಾದ ಕುಱಳು ಅತ್ಯುತ್ತಮವಾದ ನೀತಿಗ್ರಂಥವೆಂದು ಖ್ಯಾತಿಯನ್ನು ಪಡೆದಿದೆ. ಇದಕ್ಕೆ ತಮಿಳು ಸತ್ಯವಾಕ್ಯ, ಉತ್ತರವೇದ, ದ್ರಾವಿಡವೇದ, ಸಾಧಾರಣವೇದ ಎಂಬ ಹೆಸರುಗಳನ್ನೂ ಕೊಟ್ಟಿದ್ದಾರೆ. ಈ ಗ್ರಂಥವು ಇಂಗ್ಲಿಷ್ ಭಾಷೆಗೆ ಮಾತ್ರವೇ ಅಲ್ಲದೆ ಲಾಟಿನ್, ಫ್ರೆಂಚ್, ಜರ್ಮನ್, ಇಟಾಲಿಯನ್ ಎಂಬ ಭಾಷೆಗಳಿಗೂ ಪರಿವರ್ತಿಸಲ್ಪಟ್ಟಿದೆ. ಹಿಂದುಸ್ಥಾನದ ಯಾವಭಾಷೆಯಲ್ಲಿಯೂ ಇದಕ್ಕೆ ಸಮಾನವಾದ ಗ್ರಂಥವಿಲ್ಲವೆಂದು ಕೆಲವರು ವಿದ್ವಾಂಸರ ಅಭಿಪ್ರಾಯವು. ಪಾಶ್ಚಾತ್ಯಪಂಡಿತರಲ್ಲಿ ಕೆಲವರು ಈ ಗ್ರಂಥವನ್ನು ಅತ್ಯುತ್ತಮವಾದುದೆಂದು ವಿಶೇಷವಾಗಿ ಶ್ಲಾಘಿಸಿ ಬರೆದಿದ್ದಾರೆ. ಅವರ ಅಭಿಪ್ರಾಯಗಳಲ್ಲಿ ಕೆಲವು ಇಂಗ್ಲಿಷ್ ಪೀಠಿಕೆಯಲ್ಲಿ ಕೊಟ್ಟಿವೆ. ಈ ಗ್ರಂಥಕ್ಕೆ ಹತ್ತು ಪ್ರಾಚೀನವ್ಯಾಖ್ಯಾನಗಳಿವೆ. ಇದರಲ್ಲಿ ಪ್ರಾಯಿಕವಾಗಿ ಸರ್ವಮತಸಾಧಾರಣವಾದ ವಿಷಯಗಳು ಪ್ರತಿಪಾದಿತವಾಗಿರುವುದರಿಂದ ಹಿಂದುಸ್ಥಾನದ ಹಲವುಮತದವರೂ ಈ ಕವಿ ನಮ್ಮವನು ತಮ್ಮವನು ಎಂದು ಹೇಳಿಕೊಳ್ಳುತ್ತಿದ್ದಾರೆ. ಈ ಕಾರಣದಿಂದಲೇ ಇದಕ್ಕೆ ಸಾಧಾರಣವೇದವೆಂಬ ಹೆಸರು ಬಂದಂತೆ ಕಾಣುತ್ತದೆ.

ಕುಱಳ್ ಎಂಬ ಶಬ್ದಕ್ಕೆ ಕುಳ್ಳು ಎಂದರ್ಥವು. ಕುಱಳ್ ಎಂಬ ತಮಿಳು ಛಂದಸ್ಸಿನಲ್ಲಿ ಬರೆದ ಸಣ್ಣ ದ್ವಿಪದಿಗಳುಳ್ಳುದಾದುದರಿಂದ ಈ ಗ್ರಂಥಕ್ಕೆ ಕುಱಳ್ ಎಂಬ ಹೆಸರು ಬಂದಿದೆ. ಈ ದ್ವಿಪದಿಗಳಿಗೆ ಮೊದಲು ಪಾದದಲ್ಲಿ 4 ಗಣಗಳೂ ಎರಡನೆಯದರಲ್ಲಿ 3 ಗಣಗಳೂ ಇವೆ. ಈ ಗ್ರಂಥವಲ್ಲಿ ಹತ್ತು ಹತ್ತು ದ್ವಿಪದಿಗಳುಳ್ಳ 133 ಅಧಿಕಾರಗಳಿವೆ; ಧರ್ಮ, ಅರ್ಥ, ಕಾಮ ಎಂಬ ತ್ರಿವರ್ಗವೇ ಇದರಲ್ಲಿ ಪ್ರತಿಪಾದಿತವಾದ ವಿಷಯವು. ಈ ದ್ವಿಪದಿಗಳು ಸೂತ್ರಗ

ಳಂತೆ ಅತಿಸಂಗ್ರಹವಾಗಿ ಆಕಾರದಲ್ಲಿ ಸಣ್ಣವಾಗಿದ್ದರೂ ವಿಪುಲವಾದ ಅರ್ಥವನ್ನು ಗರ್ಭೀಕರಿಸಿಕೊಂಡಿವೆ. ಈ ಯಂಶವನ್ನು ಪರಣರ್, ಇಡ್ಶೈಕ್ಕಾಡರ್ ಎಂಬ ಇಬ್ಬರು ಪ್ರಾಚೀನಕವಿಗಳು ಈ ರೀತಿಯಾಗಿ ವರ್ಣಿಸಿದ್ದಾರೆ:—

ವಿಷ್ಣು ಕುಱಳಾಗಿ (ಎಂದರೆ ಕುಳ್ಳಾಗಿ, ವಾಮನನಾಗಿ) ಸ್ವರ್ಗವನ್ನೂ ಭೂಮಿಯನ್ನೂ ಎರಡು ಪಾದಗಳಿಂದ ಅಳೆದಂತೆ ತಿರುವಳ್ಳುವಕವಿ ತನ್ನ ಕುಱಳ್ (ಸಣ್ಣ) ಪದ್ಯಗಳ ಎರಡು ಪಾದಗಳಿಂದ ಪ್ರಪಂಚವನ್ನೆಲ್ಲಾ ಅಳೆದಿದ್ದಾನೆ.[1]

ತಿರುವಳ್ಳುವ ಕವಿಯ ದ್ವಿಪದಿಗಳು ಸಾಸವೆಯ ಕಾಳಿನಲ್ಲಿ ದ್ವಾರವನ್ನು ಮಾಡಿ ಸಪ್ತಸಮುದ್ರಗಳನ್ನೂ ಹೊಗಿಸಿದಂತೆ ಇವೆ.[2]

ಈ ಗ್ರಂಥದ 133 ಅಧಿಕಾರಗಳೊಳಗೆ 4 ಅಧಿಕಾರಗಳು ಅವತರಣಿಕಾರೂಪವಾಗಿವೆ; ಉಳಿದುವುಗಳಲ್ಲಿ 34 ಧರ್ಮವನ್ನೂ 70 ಅರ್ಥವನ್ನೂ 25 ಕಾಮವನ್ನೂ ಪ್ರತಿಪಾದಿಸುತ್ತವೆ. ಅರ್ಥಭಾಗದಲ್ಲಿ ಅರ್ಥಶಾಸ್ತ್ರದಲ್ಲಿ ಹೇಳುವಂತೆ ರಾಜನ ವಿಷಯವಾಗಿಯೂ ರಾಜ್ಯಾಂಗಗಳ ವಿಷಯವಾಗಿಯೂ ಹಲವು ಅಂಶಗಳು ಹೇಳಿವೆ. ಈ ಶ್ಲಾಘ್ಯವಾದ ರತ್ನಖನಿಯಿಂದ ಕೆಲವು ರತ್ನಗಳನ್ನು ಮಾತ್ರ ಆರಿಸಿಕೊಂಡು ಯಥಾಮತಿ ಕನ್ನಡಕ್ಕೆ ಪರಿವರ್ತಿಸಿದ್ದೇನೆ. ಆರಿಸಿರುವ ಭಾಗಗಳು:—ಅವತರಣಿಕೆಯಿಂದ 2 ಅಧಿಕಾರಗಳು,

---

1. ಮಾಲುಂ ಕುಱಳಾಯ್ ವಳನ್ದಿರಣ್ಡು ಮಾಣಡಿಯಾಲ್
ಞಾಲಮುಱುದು ನಯನ್ದಳನ್ದಾನ್—ವಾಲಱಿವನ್
ವಳ್ಳುವರುಂ ತಙ್ಗುಱಳ್ ವೆಣ್ಬಾವಡಿಯಾಲ್ ವೈಯತ್ತಾರ್
ಉಳ್ಳುವವೆಲ್ಲಾಮಳನ್ದಾರೋರ್ನ್ದು.

2. ಕಡುಗೈತ್ತುಳೈತ್ತೇೞ್ ಕಡಲೈಪ್ಪುಗಟ್ಟ
ಕ್ಕುಱುಗತ್ತಱಿತ್ತ ಕುಱಳ್.

ಧರ್ಮಭಾಗದಿಂದ 2೫ ಅಧಿಕಾರಗಳು, ಅರ್ಥಭಾಗದಿಂದ 10 ಅಧಿಕಾರಗಳು: ಒಟ್ಟು 3೫ ಅಧಿಕಾರಗಳು. ಅಧಿಕಾರಗಳಿಗೆ ವ್ಯಾಖ್ಯಕೆಯಲ್ಲಿರುವಂತೆಯೇ ಸಂಖ್ಯೆಗಳು ಕೊಟ್ಟಿವೆ. ನೀತಿಮಂಜರಿಯ ಪ್ರಥಮಭಾಗದಂತೆಯೇ ಈ ಭಾಗವನ್ನೂ ಹಳಗನ್ನಡದಲ್ಲಿ ಸಾಧ್ಯವಾದಷ್ಟಿಗೆ ಪ್ರಾಚೀನಜೈನಕವಿಗಳ ಸರಣಿಯನ್ನು ಅನುಸರಿಸಿ ಬರೆದಿದ್ದೇನೆ. ಕನ್ನಡದಲ್ಲಿ ಈಗ ಅದೃಶ್ಯವಾಗಿರುವ ಱ, ೞ ಎಂಬ ಅಕ್ಷರಗಳು ಇತರ ದ್ರಾವಿಡಭಾಷೆಗಳಲ್ಲಿ ಪ್ರಾಯಿಕವಾಗಿ ಬಳಕೆಯಲ್ಲಿರುವುದರಿಂದಲೂ ಶಬ್ದವ್ಯುತ್ಪತ್ತಿಶಾಸ್ತ್ರದ (Philology) ಜ್ಞಾನಕ್ಕೆ ಬಹಳಮಟ್ಟಿಗೆ ಸಹಕಾರಿಯಾಗಿರುವುದರಿಂದಲೂ ಅವುಗಳನ್ನು ಪದ್ಯಗ್ರಂಥಗಳಲ್ಲಿಯಾದರೂ ಪ್ರಚಾರಕ್ಕೆ ತರುವುದು ಪ್ರಯೋಜನಕಾರಿಯಾಗದೆ ಇರಲಾರದೆಂದು ಭಾವಿಸಿ ಆ ಅಕ್ಷರಗಳನ್ನು ಈ ಗ್ರಂಥದಲ್ಲಿಯೂ ಉಪಯೋಗಿಸಿದ್ದೇನೆ. ವಾಚಕರ ಸೌಕರ್ಯಕ್ಕಾಗಿ ಕ್ಲಿಷ್ಟಪದಗಳಿಗೆ ಅರ್ಥವು ಗ್ರಂಥಾಂತ್ಯದಲ್ಲಿ ಕೊಟ್ಟಿದೆ.

ಕನ್ನಡ, ತಮಿಳು ಈ ಎರಡು ಭಾಷೆಗಳನ್ನೂ ಸ್ವಲ್ಪಮಟ್ಟಿಗೆ ತಿಳಿದಿರುವುದಕ್ಕೆ ಇದೊಂದು ಪ್ರಯೋಜನವೆಂದು ಭಾವಿಸಿ ಈ ಗ್ರಂಥವನ್ನು ಬರೆದು ಕನ್ನಡಿಗರಿಗೆ ಕಾಣಿಕೆಯಾಗಿ ಒಪ್ಪಿಸಿದ್ದೇನೆ. ಇದರಲ್ಲಿ ಏನಾದರೂ ದೋಷವಿದ್ದರೆ ಅದನ್ನು ಗಣನೆಗೆ ತಾರದೆ ಸಹೃದಯರಾದ ಮಹಾಶಯರು ಗುಣವನ್ನೇ ಗ್ರಹಿಸಿ ಆನಂದಿಸುವರೆಂದು ನಾನು ನಂಬುತ್ತೇನೆ.

ಬೆಂಗಳೂರು, ೨೩ – ೧೦ — ೧೯೧೧     ರಾ. ನರಸಿಂಹಾಚಾರ್.

# Contents.

## ವಿ ಷ ಯ ಸೂ ಚಿ ಕೆ .

# ನೀತಿಮಂಜರಿ.

---

**ಮಂಗಳ ಶ್ಲೋಕಗಳು.**

ಶ್ರೀಕಾಂತಂ ಕರುಣಾತಟ ।
ನೀಕಾಂತಂ ಪಾದಪಂಕಜಾನತವಾಗ್ದೇ ॥
ವೀಕಾಂತಂ ಪಾಲಿಕೆ ಜಗ ।
ತೀಕಾಂತಂ ಭಕ್ತವರ್ಗಮಂ ಭಗವಂತಂ ॥

ಪಿರಿದುಂ ಸಂಸೃತಿಚಕ್ರದೆ ।
ನರಲ್ವ ನರರೀಂಟ ಪಡೆಯೆ ನಿಃಶ್ರೇಯಸಮಂ ॥
ತಿರುವಾಯ್ಮೊಟಿಯೆಂಬಮರ್ದಂ ।
ತಿರೆಯೊಳ್ ಪಸರಿಸಿದ ಮಾಱನಡಿಗೆಱಗಿದಪೆಂ॥

---

**ಕುಱಳ್.**

---

1. ದೇವತಾಸ್ತುತಿ.

ತಿರೆಯೊಳ್ ನೆಗಟ್ತೆವಡೆದ ।
ಕ್ಷರಮಾಲೆಯೊಳೆಲ್ಲಮೆಂತುಟಾದಿಯಕಾರಂ ॥
ನಿರುಪಮಕಲ್ಯಾಣಗುಣಾ ।
ಕರನಕ್ಷರನೆಂತುಟಾದಿಯಾ ಜಗಕೆಲ್ಲಂ ॥ 1 ॥

ಪಲವುದಿನಮಲಸದೊರ್ವಂ ।
ಕಲೆಯಂ ಕಲ್ತುಡಱಿನಾದ ಫಲಮೇಂ ಗಳ ನಿ ॥
ಮರ್ಗಲಚಿದ್ರೂಪನ ವರಮಂ ।
ಗಲದಾಯಕಚರಣಯುಗಲಕೆಱಗದೊಡೊಲವಿಂ ॥ 2 ॥

ಲೆಂಕರ ಬಗೆದಾವರೆಯೊಳ್ ।
ಬಿಂಕದೆ ನೆಲಸಿರ್ಪ ದೇವನಡಿದಾವರೆಯಂ ॥
ಕೊಂಕದೆ ಜಾನಿಪ ಮನುಜಂ ।
ಸಂಕೆಯಿನಿತ್ತಿಲ್ಲದೆಯ್ದುಗುಂ ಸದ್ಗತಿಯಂ ॥ 3 ॥

ರಾಗದ್ವೇಷಂಗಳ್ ತನ ।
ಗಾಗಳುಮಿಲ್ಲದನ ದೇವನಂಘ್ರಿಗೆ ಶಿರಮಂ ॥
ಬಾಗುವ ಮನುಜನನೆಂದುಂ ।
ತಾಗದು ತಾಪತ್ರಯಿಜದುಃಖವ್ರಾತಂ ॥ 4 ॥

ಜಗತೀಜಾತಕ್ಕೊಡೆಯನ ।
ನೆಗಟ್ತೆಯಂ ಬಣ್ಣಿಪಾತನೆಡೆಯನದೆಂದುಂ ॥
ಪುಗುತರಲಣ್ಮವವಿದ್ಯೆಯಿ ।
ನೊಗೆತರ್ಪಾ ಸುಕೃತದುಷ್ಕೃತಂಗಳ್ ನಿಸದಂ ॥ 5 ॥

ಅಯ್ದಿಂದ್ರಿಯಂಗಳಿಂದೊಗೆ ।
ವಯ್ದಾಸೆಯನೊಕ್ಕಲಿಕ್ಕಿದಮಲಂ ನಿಯಮಂ ॥
ಗೆಯ್ದ ಋಜುಮಾರ್ಗದೊಳ್ ಬಿಡ ।
ದೆಯ್ದುವ ನರನುಟಿದು ಜನನಮಂ ಸುಖಿಯಪ್ಪಂ ॥ 6 ॥

ತನಗುಪಮೆಯಿಲ್ಲದನ ಪದ ।
ವನಜಾತದ್ವಯಮುರಂದಸೇವ್ರೋನ್ಮತ್ತ ॥
ಗ್ರ್ನಘಗ್ರ್ಲ್ಲದೆ ಮನದೊಳ್ ।
ಜನಿಯಿಪ ಕೋಟಲೆಯನುೞಿಯಲಸದಳಮಾರ್ಗಂ ॥ 7 ॥

ಅೞಿಗಡಲೆನಿಸಿದ ಸುಗುಣನ ।
ಮೆಱೆವ ಪದದ್ವಂದ್ವಮೆಂಬ ಪಾಱಿಂ ಕಟ್ಟ ॥
ಳ್ಕಱಿನೆಯ್ದಿದವಗ್ರ್ಲ್ಲದೆ ।
ಪೆಱಗಡಲಂ ದಾಂಟಲಾರ್ಗಮರಿದೇಗೆಯ್ದುಂ ॥ 8 ॥

ಬಳಸಿರ್ಪ ತಮ್ಮ ಪಿಷಯಂ ।
ಗೆಳನೆಂತುಂ ಗ್ರಹಿಸದಿಂದ್ರಿಯಂಗಳವೋಲ್ ನಿ ॥
ಷ್ಫಳಮುಕ್ಕುಮಷ್ಟಗುಣದಿಂ ।
ದಳಂಕೃತನ ದೇವನಂಘ್ರಿಗೆಱಗದ ತಲೆಗಳ್ ॥ 9 ॥

ಜಗದೊಡೆಯನ ಚರಣಾಂಬುಜ ।
ಯುಗಮಂ ಮನವೊಲ್ದು ಸಾರ್ದು ಮೞೆವೊಕ್ಕರ್ ತೊ ॥
ಟ್ಟಗೆ ದಾಂಟಿದಪರ್ ಜನಿಯೆಂ ।
ಬಗಾಧಸಾಗರಮನನ್ಯರೆಂದುಂ ದಾಂಟರ್ ॥ 10 ॥

---

## 4. ಧರ್ಮ.

ಪಡೆಗುಂ ಮುಕ್ತಿಶ್ರೀಯುಂ ।
ಪಡೆಗುಂ ಸ್ವರ್ಗಾದಿಭೋಗಸಂಪತ್ತಿಯನೆಂ ॥
ದೊಡೆ ಸುಖಕೆ ಧರ್ಮದಿಂದೀ ।
ಪೊಡವಿಯೊಳಗ್ಗಳಮೆನಿಪ್ಪ ಸಾಧನಮುಂಟೇ ॥ 11 ॥

ಅಱಿನಂ ಮಾೞ್ಪುದಱಿಂದಂ |
ಪೇೞಿತಾವುದೊ ಮಾನಸಂಗೆ ಸುಖಸಾಧನಮಾ |
ಅಱಿನಂ ಮಱೆವುದಱಿಂದಂ |
ಪೇೞಿತಾವುದೊ ದುಃಖಜಾಲಜನ್ಮಸ್ಥಾನಂ || 12 ||

ಒಡಲನಸು ಬಿಡದ ಮುನ್ನಂ |
ತಡೆಯುದೆ ನಿಷ್ಕಪಟಭಾವದಿಂದಾರ್ಪಿನಿತಂ ||
ನುಡಿಯೊಳ್ ಚಿತ್ತದೊಳಿಸಕದೊ |
ಳಿಡೆವಿಡದೆಲ್ಲಂದದಿಂದಮೆಸಗುವುದಱಿನಂ || 13 ||

ಇನಿಸುಂ ಕಳಂಕಮಿಲ್ಲದ |
ಮನಮುಳ್ಳವನಪ್ಪುದನಿತೆ ಅಱಿನೆಂಬುದು ಮ ||
ತ್ತಿನ ವೇಷಭಾಷೆಗಳ್ ನೋ |
ಟ್ಪಿನಮಾಡಂಬರಮೆ ಮನದೆ ನೆಲಸಿರೆ ದೋಷಂ || 14 ||

ಪರರುನ್ನತಿಯೊಳಸೂಯಾ
ಭರಮನ್ಯರ ಪುರುಳೊಳಾಸೆ ಮಾಮುಸಕಂ ನಿ ||
ಷ್ಠುರವಚನಮೆಂಬಿವಂ ಪರಿ |
ಹರಿಸುತ್ತುಂ ತನ್ನ ವೃತ್ತದಿಂ ನೆಗೞ್ವುದಱಿಂ 15 ||

ಎಳೆಯಗ್ಗ್ರಮುಗೇಕಱಿನೀ |
ಗಳದಂ ವಿಸ್ತರದೆ ಕೆೞವರಾದಂದೊಲವಿಂ ||
ತಿಳಿವಮೆನವೇಡಮುದನಾ |
ಗಳುಮೆಸಗದೆ ಪೊಂದುವಂದು ಪೊಂದದ ಮಿತ್ರಂ || 16 ||

ತಿಳಿವೊಡೆ ಧರ್ಮಾಚರಣದ |
ಫಳಮಂ ಶಾಸ್ತ್ರಮನೆ ನೋಡವೇಡಿದುದಿಲ್ಲಂ ||
ದಳಮಂ ಪೊತ್ತವನೊಳಮುದ |
ಱೊಳಗಿರ್ದನೊಳಂ ಸಮಂತು ತಿಳಿಯಲ್ ಬರ್ಕುಂ || 17 ||

ದಿವಸಂಗಳೊಳೊಂದುಂ ಶೂ |
ನ್ಯವಾಗದಂತೊರ್ವನೆಱನನೊಡರಿಸುಗಾ ಧ ||
ರ್ಮವವಂ ಜನ್ಮಾಂತರಕೆ |
ಯ್ದುವ ಪಥಮಂ ಕಟ್ಟೆ ತಡೆವ ಕಗ್ಗಲ್ಲಕ್ಕುಂ 18 ||

ಬಗೆವೊಡಱದೊಡನೆ ಸಮನಿಪ |
ಸೊಗಮೇ ಸೊಗಮಱನನುೞಿದು ಸಮನಿಪುದೆಂದುಂ ||
ಸೊಗಮಲ್ತು ದುಃಖಮಂ ಬೆಳೆ |
ವಗೆ ಪಾಪದ ಬಿಟ್ಟು ಪೞಿಯು ಜನ್ಮಸ್ಥಾನಂ || 19 ||

ಮನುಜಂ ಮಱೆಯದೆ ಮನನೊ |
ಲ್ದನುದಿನಮಾಚರಿಸವೇಡಿದುದು ಧರ್ಮಮೆ ನಂ ||
ಜಿನವೋಲ್ ತ್ಯಜಿಸಲ್ವೇಡಿದು |
ದನವರತಂ ದ್ವೇಷದಿಂದಧರ್ಮಮೆ ದಿಟದಿಂ || 20 ||

---

## 6. ಗೃಹಿಣಿಯ ಗುಣ.

ಮನೆವಾೞ್ಕೆಗುಚಿತಮೆನಿಸುವ |
ವಿನುತಗುಣಕ್ರಿಯೆಗಳಿಂ ಮನಂಗೊಳಿಸುತ್ತುಂ ||
ಮನೆದನ್ನನಾಯಕನುಗುಣ |
ಮೆನೆ ಬೀಯಮನೆಸಪ ಸತಿಯೆ ಸಹಧರ್ಮಿಣಿ ಕೇಳ್ || 21 ||

ಗೃಹಿಣಿಯೊಳಿಲ್ಲದೊಡಿನಿಸುಂ ।
ಗೃಹಾಶ್ರಮಕ್ಕುಚಿತಮಪ್ಪ ಸುಗುಣಕ್ರಿಯೆಗಳ್ ||
ಬಹುಧನಸಮೃದ್ಧಮೆನೆಯುಂ ।
ಗೃಹಮದು ಬಱುವನೆಯೆ ಬಾಳ್ಕೆಯದಱೊಳ್ ವಿಫಲಂ ||22||

ಇಲ್ಲದುದಾವುದು ಮನೆಯೊಳ್ ।
ಸಲ್ಲಲಿತಗುಣಾವತಂಸೆಯಾದೊಡೆ ನಲ್ಲಳ್ ||
ಎಲ್ಲಮುಮಿರ್ದುಂ ನಲ್ಲಳ್ ||
ಪೊಲ್ಲಳ್ ತಾನಾದೊಡುಳ್ಳುದಾವುದು ಮನೆಯೊಳ್ || 23 ||

ಪ್ರೀತಿಯಿನೊರ್ವಂ ಪಡೆವ ವಿ ।
ಭೂತಿಯದಾವುದೊ ಕಳತ್ರರತ್ನದಿನದಱೊಳ್ ||
ಪಾತಿವ್ರತ್ಯಮೆನಿಪ್ಪು ।
ದ್ಯೋತಕಗುಣಮಗೆಲದಂತು ನೆಲಸುವೊಡೆಂದುಂ || 24

ಇನನೇ ದೈವಮೆನುತ್ತುಂ ।
ಮನದೊಳ್ ಭಾವಿಸುತವಂಗೆ ಭಕ್ತ್ಯತಿಶಯದಿಂ ||
ವಿನಮಿಸುತುಮಿತರದೈವಂ ।
ನೆನೆಯದ ಸತಿ ಪೊಯ್ಯವೇೞೆ ಮೞೆ ಪೊಯ್ಯದೆ ಪೇೞ್ ||25

ಓವುತೆ ಪಾತಿವ್ರತ್ಯಮ ।
ನಾವಗಮಾದರದೆ ಪತಿಯ ಸೇವೆಯನೆಸಗು ||
ತ್ತೋವುತುಮಿರ್ವರ ಜಸಮುಂ ।
ಪಾವನಗುಣಚರಿತೆಯೆನಿಪ ಪೆಣ್ ಸತಿಯಕ್ಕುಂ || 26 ||

ಅಗುೞಿ ಮದಿಲ್ ಬಾಗಿಲ್ ಬಿ ।
ಯ್ಯಗಮೆಂಬಿವಱಿಂದೆ ಕಾವ ಕಾಪೇವುದೊ ಪೆಣ್ ॥
ಮಿಗೆ ಪಾತಿವ್ರತ್ಯದೆ ನೆ ।
ಟ್ಟಗೆ ತನ್ನಂ ಕಾವ ಕಾಪೆ ನಲ್ಗಾಪಕ್ಕುಂ ॥ 27 ॥
ಮನವೊಲ್ದು ಜೀವಿತೇಶನ ।
ನನವರತಂ ಪ್ರೇಮಭರದಿನುಪಚರಿಸುವ ಮಾ ॥
ನಿನಿಯಂ ಮಂಗಳಗುಣೆಯಂ ।
ವಿನಯಾವನತರ್ಕಳಾಗಿ ಮನ್ನಿಪರಮರರ್ ॥ 28 ॥
ಮಸುಳದ ಜಸಮಂ ದೆಸೆಯೊಳ್ ।
ಪಸರಿಸಲೆಳಸುವ ಕಳತ್ರಮಿಲ್ಲದರ್ಗೆಂದುಂ ॥
ಪಿಸುಣಾಡುವರಿದಿರೊಳ್ ಸಮ ।
ನಿಸದು ವಲಂ ಸಿಂಗದಂತೆ ಗಮನಿಪ ಬಿಂಕಂ ॥ 29 ॥
ಪಿರಿಯರ್ ಗೃಹಿಣಿಯ ಸುಗುಣಸು ।
ಚರಿತಂಗಳ್ ಪತಿಗೆ ಭಾಗ್ಯಮೆಂಬರ್ ಸತ್ಪು ॥
ತ್ರರನಾಕೆ ಪಡೆವುದಾಗೆಣ ।
ಚರಿತಂಗಳ್ಗನುಪಮೇಯಭೂಷಣಮೆಂಬರ್ ॥ 30 ॥

---

## 7. ಮಕ್ಕಳನ್ನು ಪಡೆವುದು.

ಇಳೆಯೊಳ್ ಮನುಜಂ ಪಡೆಯ ।
ಲ್ಕೆಳಸುವ ಭಾಗ್ಯಂಗಳೊಳವು ಪಲವವಱೊಳ್ ಮ ॥
ಕ್ಕಳನಱಿವುಳ್ಳವರಂ ನಿ ।
ರ್ಮಳಗುಣರಂ ಪಡೆವ ಭಾಗ್ಯಕಿನ್ನೆಣೆಯುಂಟೇ ॥ 31 ॥

ನಿಂದೆಗೆ ಪಕ್ಕಾಗದ ಗುಣ |
ಬೃಂದಕೆ ಬೀಡೆನಿಪ ಮಕ್ಕಳಂ ಪಡೆದವನಂ ||
ಪಿಂದಣ ಕರ್ಮದ ದೂಸಱ |
ನೊಂದುವ ಜನ್ಮಂಗಳೇೞಱೊಳಮೆಯ್ದದೞಲ್ || 32 ||

ತನುಜರ ಸದ್ವೃತ್ತದೆ ಸ |
ವ್ಮನಿಪುದಱಿಂ ತಂದೆವಿರ್ಗ್ಗೆ ಸುಖಸದ್ಗತಿಗಳ್ ||
ವಿನಯಾದಿಗುಣವಿಭೂಷರ್ |
ತನಯರ್ ತಂದೆಗಳ ಭಾಗ್ಯಮೆಂಬರ್ ಪಿರಿಯರ್ || 33 ||

ಕೆಂದಳಿರಂದದ ಕಿಱುವೆರ |
ಲಿಂದಂ ಕಿಱುಗೂಸು ಸುಟ್ಟೆ ತೋಱುತ್ತೆ ಮನಂ ||
ದಂದು ಕಿಮುಟ್ಟಿದ ಬೋನಂ |
ತಂದೆಗೆ ಸುಧೆಯತ್ತಣಿಂದಮಿನಿದೆನಿಸದೆ ಪೇೞ್ || 34 ||

ಕೂಸಿನ ಮೃದುತನುವಂ ತ |
ಡ್ಕೈಸುವುದೇ ಪಿತನೊಡಲ್ಗೆ ಸೊಗಮೆಂಬುದು ಮೇಣ್ ||
ಕೂಸಿನ ತೊದಲೊಡಗೂಡಿದ |
ಬಾಸೆಯನಾಲಿಪುದೆ ಕಿವಿಗೆ ಸೊಗಮೆಂಬುದು ಕೇಳ್ || 35 ||

ಮಧುರಂ ಬೀಣೆಯ ನಾದಂ |
ಮಧುರಂ ವೇಣುವ ನಿನಾದಮೆಂಬರ್ ವಿಗತೋ ||
ಪಧಿಯಂ ಕೇಳದರಕ್ಕುಂ |
ಸುಧೆಯಂ ತಳ್ತೊಪ್ಪುವ ಸುತರ ಕಲಭಾಷಿತಮಂ || 36 ||

ಸುತನಂ ವಿತತಕಲಾಪರಿ |
ಣತನಂ ಸಜ್ಜನಸಮಾಜಸನ್ಮಾನಿತನಂ ||
ಧೃತಿಯುತನಂ ಮಾಳ್ಪುದೆ ದಲ್ |
ಪಿತನಾತಂಗೆಸಗವೇಡಿದುಪಕೃತಿ ಧರೆಯೊಳ್ || 37 ||

ತನುಜಂ ವಿದ್ಯಾಪರಿಣತ |
ನೆನಿಸಲೊಡಂ ತಂದೆಗೊಗೆವ ಸಂತಸದಿಂದಂ ||
ಘನಮುಹಿಮರಪ್ಪ ವಿದ್ಯಾ |
ವಿನೋದಿಗಳ್ಗೊಗೆವ ಸಂತಸಂ ಪಿರಿದಕ್ಕುಂ || 38 ||

ತನಯಂ ಜನಿಯಿಸಿದಾಗಳ್ |
ಜನನಿಗೆ ಸಮುನಿಸುವ ಸಂತಸಕ್ಕಗ್ಗಳಮಾ ||
ತನಯಂ ಕಲಾವಿಶಾರದ |
ನೆನಿಸಿದುದಂ ಕೇಳೆ ಮನದೊಳೊಗೆವಾನಂದಂ || 39 ||

ಶ್ರುತಮುಂ ಚರಿತ್ರಮುಂ ಕಾ |
ಣುತುಮಿವನಂ ಪಡೆಯಲೆನಿತು ನೋಂತನೊ ಪಿತನೆಂ ||
ಬ ತೆಱದೆ ನೆಗಳ್ವುದೆ ತನುಜಂ |
ಮತಿಗಲಿಸಿದ ತನ್ನ ತಂದೆಗೆಸಪುಪಕಾರಂ || 40 ||

---

## 8. ಪ್ರೀತಿ

ಪ್ರಿಯರದವಟಲಂ ಕಂಡಂ |
ದಯುತ್ನದಿಂ ಕಣ್ಗಳಿಂದೆ ಸೂಸುವ ಪನಿ ಕೂ ||
ರ್ಮೆಯನಿರದೆ ಸಾಱುಗುಂ ಕೂ |
ರ್ಮೆಯುಮಂ ಸೆಱೆಗೆಯ್ದು ಬಂಧಿಪಗ್ಗಳಮುಂಟೇ || 41 ||

ಪ್ರೇಮವಿಹೀನರ್ ತಮ್ಮಯ ।
ಹೇಮಾದಿಗಳೆಲ್ಲಮಾತ್ಮಭೋಗಕ್ಕೆಂಬರ್ ॥
ಪ್ರೇಮಾರ್ದ್ರಹೃದಯರಮಲೋ ।
ದ್ದಾಮಗುಣರ್ ತಮ್ಮ ದೇಹಮುಂ ಪೆಱರ್ಗೆಂಬರ್ ॥ 42 ॥

ಧರಣೀತಳದೊಳ್ ಪಡೆಯ ।
ಲ್ಕರಿದೆನಿಸುವ ಮನುಜಜನ್ಮಮಾಭವದೊಳ್ ಬಿ ॥
ತ್ತರಿಸಿದ ಕೂರ್ಮೆಯ ಫಳಮೋ ।
ಪರಿಸದೆ ಫಳಮಾವುದದುವೆ ಈ ಜನ್ಮದೊಳಂ ॥ 43 ॥

ಒದವಿದ ಬಂಧುಪ್ರೀತಿಯಿ ।
ನುದಯಿಕುಮನ್ಯರೊಳಮೊಲವು ಮೇಣಾ ಒಲವಿಂ ॥
ದುದಯಿಸುಗುಂ ತನಗೆರವಿ ।
ಲ್ಲದ ಸಾರ್ವಜನೀನಮಿತ್ರನೆನಿಪುರುಭಾಗ್ಯಂ ॥ 44 ॥

ಇಳೆಯೊಳ್ ಸಂಸಾರಸುಖಂ ।
ಗಳನನುಭೋಗಿಸಿ ಪರತ್ರೆಯೊಳ್ ಪರಮಸುಖಂ ॥
ದಳೆವುದು ಸಹಜಪ್ರೇಮದೊ ।
ಳಳವಟ್ಟಾಚರಣದತುಳಫಳಮೆಂದುಸಿರ್ವರ್ ॥ 45 ॥

ಪಿರಿದುಂ ಪ್ರೇಮಂ ಧರ್ಮಾ ।
ಚರಣಕೆ ಸಹಕಾರಿಯೆನಿಪೊಡಂ ಪೊಲ್ಲಮೆಯುಂ ॥
ವಿರಚಿಸಿದರೊಳಂ ಪ್ರೇಮಂ ।
ಪರಿಹರಿಸದೆ ಬಗೆಯೊಳೊಗೆವ ದುಶ್ಚಿಂತೆಗಳಂ ॥ 46 ॥

ಎಲುವಿಲ್ಲದ ಪುೞುವಂ ಬಂ ।
ಬಲಬಾಡುವ ತೆಱದೆ ಭಾಸ್ಕರಂ ಚುರ್ಚುವವೋ ॥
ಲೊಲವಿಲ್ಲದ ನರನಂ ಮ ।
ಮ್ಮಲಮಱುಗುವ ತೆಱದೆ ಚುರ್ಚುಗುಂ ರವಿತನಯಂ ॥ 47 ॥
ಇನಿಸುಂ ಜಲವಿಲ್ಲದ ವೇ ।
ದಿನಿಯೊಳ್ ತಳಿರ್ದೊಂಗಲೊಗೆವೊಡೊಣಗಿದ ಗಿಡುವೊಳ್ ॥
ಮನದಲ್ಲಿ ಕೂರ್ಮೆಯಿಲ್ಲದ ।
ಮನುಜನ ಮನೆವಾೞ್ಕೆಯಲ್ಲಿ ಸೊಗಮುದಯಿಸುಗುಂ ॥ 48 ॥
ಆಲೀನಪ್ರೇಮರಸಾ ।
ವಾಲಮೆನಿಪ್ಪೊಡಲೆ ಜೀವದಿರ್ಕ್ಕೆ ತದನ್ಯಂ ॥
ತೋಲಂ ಬಾಸಣಿಸಿದ ಕಂ ।
ಕಾಲಮೆ ದಲ್ ಜೀವದಿರ್ಕ್ಕೆಯೆನಲಾಗದದಂ ॥ 49 ॥
ಅವಯವಮೆಲ್ಲಂ ದೇಹದೊ ।
ಳವಿಕಲಮಾಗಿರೆಯುಮಮಿತವಿಭವೋತ್ಕರ್ಷಂ ॥
ಸವನಿಸೆಯುಂ ಫಲಮೇಂ ಮನ ।
ದವಯವಮೊಂದುಸಿರ್ವ ಕೂರ್ಮೆಯಿಲ್ಲದೊಡಿನಿಸುಂ ॥ 50 ॥

---

## 9. ಅತಿಥಿಸತ್ಕಾರ.

ವನಕೆ ತಪಂಬಡಲೆಯ್ದದೆ ।
ಮನೆಯೊಳ್ ಗೃಹಮೇಧಿಯಾಗಿ ನೆಲಸುತ್ತನುವಿಂ ॥
ಧನಮುರ್ಜಿಸಿ ಬಾೞ್ವುದು ಬಿ ।
ರ್ದಿನರಂ ಸತ್ಕರಿಸಿ ಸಾಹ್ಯಮೆಸಗಲ್ಕೆ ವಲಂ ॥ 51 ॥

ಬಾಗಿಲೊಳ್ ಬಂದು ನಿಂದ ।
ಭ್ಯಾಗತರಂ ಸಡ್ಡೆಗೆಯ್ಯದೊರ್ವನೆ ತಾನು ॥
ಱ್ಬೋಗರಮಮೃತಮೆ ಆದೊಡ ।
ಮೇಗಂ ಸ್ಪೃಹಣೀಯಮಲ್ತು ಮನುಜಂಗಿಳೆಯೊಳ್ ॥ 52

ತನ್ನೆಡೆಗೆ ಬಂದ ಬಿರ್ದಿನ ।
ರಂ ನಿಚ್ಚಂ ಮನ್ನಿಸುತ್ತೆ ಸತ್ಕರಿಸುವ ಮಾ ॥
ನೋನ್ನತಿವಡೆದನ ಬಾಳ್ಕೆ ಸ ।
ಮುನ್ನತಿಯಂ ಪಡೆಗುಮೆಡರನೊಂದದದೆಂದುಂ ॥ 53 ॥

ಹರಿಸದೆ ಮೊಗಮಲರ್ದು ಗುಣಾ ।
ಕರರಪ್ಪತಿಥಿಗಳನೊಲ್ದು ಸತ್ಕರಿಪ ಮಹಾಂ ॥
ತರ ಮನೆಯೊಳ್ ಕರುಣಾಕೇ ।
ಕರಮಂ ಬೀಱುತ್ತೆ ಕಮಲೆ ನೆಲಸುವಳೊಲವಿಂ ॥ 54 ॥

ಗುಣಿಗಳನಾಗಂತುಗಳಂ ।
ತಣಿವನ್ನೆಗಮಾದರಾತಿಶಯದಿಂ ಮುನ್ನಂ ॥
ಉಣಿಸಿ ಬಟಿಕ್ಕಂ ಮಿಕ್ಕುದ ।
ನುಣಲೆಳಸುವ ನರನ ಭೂಮಿ ಬಿತ್ತದೆ ಬೆಳೆಗುಂ ॥ 55 ॥

ಬಂದತಿಥಿಗಳಂ ಸಂತಸ ।
ದಿಂದಂ ಸತ್ಕರಿಸಿ ಪಾರ್ದು ಬರ್ಪತಿಥಿಗಳಂ ॥
ನಿಂದ ನರಂ ಮಱುಮೆಯ್ಯೊಳ್ ।
ಬೃಂದಾರಕಬೃಂಬಕಭಿಮತಾತಿಥಿಯಪ್ಪಂ ॥ 56 ॥

ಅತಿಥಿಕ್ರಿಯೆಯೆಂಬ ಮಹಾ |
ಕ್ರತುವಿನ ಫಲಕಿನಿತೆ ಎಂಬ ಪರಿಮಿತಿಯಿಲ್ಲಂ ||
ಅತಿಥಿಗಳ ತಕ್ಕುಮೆಯ ಪರಿ |
ಮಿತಿಯೇ ನೋೞ್ಪನ್ನಮದಱ ಪರಿಮಿತಿಯಕ್ಕುಂ || 57 ||

ಪುರುಳಿಂದತಿಥಿಕ್ರಿಯೆಯೆಂ |
ಬುರುಯಜ್ಞಮನೆಸಗಿಯುದಱ ಫಲಮೊಂದದವರ್ ||
ಪಿರಿದುಂ ಬೞಲ್ದು ಪಡೆದಾ |
ಪುರುಳೞಿದುದು ಕೆಟ್ಟೆನೆಂದು ಬೞಿಕುಮ್ಮಳಿಪರ್ || 58 ||

ಅತಿವಿಭವದೊಳಂ ಬಡತನ |
ಮತಿಥಿಕ್ರಿಯೆಯಂ ತೆಗೞ್ವ ಬೆಳ್ತನಮೆಂಬರ್ ||
ಮತಿಹೀನರೊಳಾ ಬೆಳ್ತನ |
ಮತಿಶಯದಿಂ ತೋರ್ಕೆಪಡೆಗುಮುಱಿದರೊಳಿಲ್ಲಂ || 59 ||

ಕಂದುವುದಾಘ್ರಾಣಿಸಲೊಡ |
ಮಂದಂಬೆತ್ತೆಸೆವ ನಾಗಮಲ್ಲಿಗೆಯ ಮಲರ್ ||
ಕಂದುವುದು ಮುಖವಿಕಾಸಮ |
ನೊಂದದೆ ನೋಡಲೊಡಮತಿಥಿವಕ್ತ್ರಸರೋಜಂ || 60 ||

---

## 10. ಮೃದುವಾಕ್ಯ.

ಪ್ರೇಮಾರ್ದ್ರಮಾಗಿಯಿನಿಸುಂ |
ವಾಮತೆಗೆಡೆಯಾಗದಂತು ಸದ್ಗುಣಮುಕ್ತಾ ||
ದಾಮರ ಧರ್ಮಜ್ಞರ ಮುಖ |
ತಾಮರಸದಿನೊಗೆವ ನುಡಿಯೆ ಇನಿನುಡಿಯೆನಿಕುಂ || 61 ||

ಬೇಡಿದ ವಸ್ತುವನೊಂದಂ ।
ನೀಡುಂ ಮನಮಲರ್ದುರ್ ತಳ್ವದೀವುದಱಿಂದಂ ॥
ನೋಡಿ ಮೊಗಮಲರ್ದು ಸವಿವಾ ।
ತಾಡುವುದಗ್ಗಳಮೆನಿಕ್ಕುಮೆಂಬರ್ ಪಿರಿಯರ್ ॥ 62 ॥

ದೂರದೆ ಕಂಡಾಗಳೆ ಮುಖ ।
ನೀರೇರುಹಮಲರೆ ನೇಹದಿಂ ನೋಡುತ್ತುಂ ॥
ಸಾರೆವರೆಯಿನಿಯ ನುಡಿಗಳ ।
ನೋರಂತೆರ್ದೆಮುಟ್ಟೆ ನುಡಿವುದಱಿಕಾಧಾರಂ ॥ 63 ॥

ಸೊಗಮನೊದವಿಸುವ ಸವಿವಾ ।
ತುಗಳಂ ನಲವಿಂದಮಾರೊಳಂ ನುಡಿವಗ್ಗಂ ॥
ವಗಮಿಲ್ಲ ಸೊಗಮನೋಡಿಸಿ ।
ದುಗುಡಮನೊದವಿಸುವ ಬಡತನಂ ಭೂತಳದೊಳ್ ॥ 64 ॥

ಮನುಜಂಗೆ ಸಕಲರಲ್ಲಿಯು ।
ಮಿನಿನುಡಿಯುಂ ಪಿರಿಯರಲ್ಲಿ ಶಾಲೀನತೆಯುಂ ॥
ಅನುಪಮಭೂಷಣಮಕ್ಕುಂ ।
ಕನಕಾದಿಗಳಿಂದಮಾದುವೇಂ ಭೂಷಣಮೇ ॥ 65 ॥

ಪುರುಳಿಂ ಪೆಱಗ್ಗೆ ಹಿತಮುಂ ।
ದೊರೆಕೊಳಿಸುವ ಸೊಲ್ಲನೆರ್ದೆಯೊಳಾರಯ್ದು ನಿದಾ ॥
ಗಿರೆ ಕಿವಿಗೆ ನುಡಿವ ಮನುಜಂ ।
ಗಿರದಟಿಗುಂ ದುರಿತಮೆಲ್ಲಮುಱಿನುಂ ಬಳೆಗುಂ ॥ 66 ॥

ಪರರ ಪರಿತಾಪಮಂ ಪರಿ ।
ಹರಿಸಿ ಸೊಗಂಬಡೆವ ಮಾರ್ಗಮಂ ತೋರ್ಪಿನಿವಾ ॥
ತೊರೆವಂಗಿಹಕ್ಕೆ ಜಸಮಂ ।
ಪರಕ್ಕೆ ದೊರೆವಡೆದ ಧರ್ಮಮಂ ದೊರೆಕೊಳಿಕುಂ ॥ 67 ॥

ಪೆಱರ ಮನಕ್ಕಿನಿಸಾನುಂ ।
ಮಱುಕಮನೊಡರಿಸದ ಮಧುರವಚನಮನೊರೆವಂ ॥
ಕಿಱಿದುಮೆಡರೊಂದದಿಹದೊಳ್ ।
ಮೆಱೆವಂ ಪರದಲ್ಲಿ ಪಡೆದು ಶಾಶ್ವತಸುಖಮಂ ॥ 68 ॥

ತನಗೆ ಪರರೊರೆವ ಮಧುರವ ।
ಚನದಿಂದಂ ಮನದೊಳೊಗೆವ ಸಂತಸಮಂ ತಾ ॥
ನನುಭವಿಸಿ ತಿಳಿದುಮೇಕೆಯೊ ।
ಮನುಜಂ ಪೆಱರಲ್ಲಿ ನಿಷ್ಠುರೋಕ್ತಿಯನೊರೆವಂ ॥ 69 ॥

ಇನಿನುಡಿಯಿರ್ಪಿನಮದನುೞಿ ।
ದಿನಿದಲ್ಲದ ನುಡಿಯನೊರ್ವನುಸಿರ್ವುದು ಕೆಯ್ಯು ॥
ಲ್ಲಿನಿವಣ್ಣಿರ್ಪಿನಮದನುೞಿ ।
ದಿನಿದಲ್ಲದ ಮಿಡಿಯನುಣ್ಬುದರ್ಕೆಣೆಯಕ್ಕುಂ ॥ 70 ॥

---

## 11. ಕೃತಜ್ಞತೆ.

ತನಗೆಂದುಂ ನೆರವಾಗದ ।
ಮನುಜಂಗೊಲವಿಂದಮೆಸಗಿದುಪಕೃತಿಗೆಖಿಲಾ ॥
ವನಿಯುಮನಮರ್ತ್ಯಲೋಕಮು ।
ಮನಿತ್ತೊಡಂ ದೊರೆಗೆ ಬಾರವೆಂಬರ್ ತಿಳಿದರ್ ॥ 71 ॥

ಎಡರಡಸಿದಾಗೆಳೊರ್ವಂ ।
ಗೊಡರಿಸಿದುಪಕಾರಮಲ್ಪಮಾದೊಡಮಾರ ॥
ಯ್ದೊಡೆ ಮಾಡಿದ ಕಾಲಮನದೆ ।
ಪೊಡವಿಗೆಮಗ್ಗಳಮದರ್ಕ್ಕೆ ಮೌಲ್ಯಮುಮುಂಟೇ ॥ 72 ॥

ಮುಯ್ಯಾವುದಿದರ್ಕೆನುತಾ ।
ರಯ್ಯದೆ ಮನವೊಲ್ದು ಮಾಡಿದುಪಕಾರಂ ತ ॥
ಳ್ತೊಯ್ಯದೆ ಪೇೞ್ ಪೆಂಪಿಂದಂ ।
ರಯ್ಯಮೆನಿಪ್ಪಂಬುರಾಶಿಯುಂ ಪೆಂಪಿಂದಂ ॥ 73 ॥

ತನಗೊಡರಿಸಿದುಪಕೃತಿಯೆ ।
ಳ್ಳನಿತಾದೊಡಮದುವೆ ಬೆಟ್ಟದನಿತೆಂದೆರ್ದೆಯೊಳ್ ॥
ನೆನೆಯುತ್ತುಂ ಗುಣಿ ಮನಮೊ ।
ಲ್ದನವರತಂ ಕೊಂಡುಕೊನೆವನುಪಕಾರಕನಂ ॥ 74 ॥

ಉಪಕೃತಿಗೆಂದುಂ ಪುಂ ಪಡೆ ।
ದುಪಕಾರದ ಮಿತಿಯೆ ಮೇರೆಯೆಂಬರ್ ಕೃಪಣರ್ ॥
ಉಪಕೃತಿವಡೆವರ ಪಾತ್ರತೆ ।
ಯುಪಕಾರದ ಮಿತಿಗೆ ಮೇರೆಯೆಂಬರುದಾರರ್ ॥ 75 ॥

ಎಡರಡಸಿದಂದು ನಿನ್ನಂ ।
ಸಡಗರದಿಂ ಪೊರೆದರಲ್ಲಿ ಸಖ್ಯಮನೆಂದುಂ ॥
ಬಿಡವೇಡ ದೋಷಕಾವಗ ।
ಮೊಡೆಗುಡದರ ಸಂಗದಿಂದೆ ತೊಲಗಲ್ವೇಡಂ ॥ 76

ತವಗೆಡಸಿದ ಸಂಕಟಮುಂ ।
ತವಿಸಿ ಸೊಗಂಬಡಿಸಿದವರ ಸೌಜನ್ಯಮನೀ ॥
ಭವವೊಂದಱೊಳಲ್ಲೀೞುಂ ।
ಭುವನಂಗಳೊಳಮುಱಿಕೆಯಿಂದೆ ನೆನೆವರ್ ಪಿರಿಯರ್ ॥ 77 ॥
ತನಗೊರ್ವನೆಸಗಿದುಪಕೃತಿ ।
ಯನಾವನುಂ ಮಱೆವುದಲ್ತು ಧರ್ಮಂ ತನಗೊ ॥
ರ್ವನಿನಾದಪಕೃತಿಯುಂ ಭೋಂ ।
ಕನೆ ಮಱೆವುದೆ ದಿಟದೆ ಗುಣದೊಳಗ್ಗಳಮೆನಿಕುಂ ॥ 78 ॥
ಮುಂದೊಂದುಪಕೃತಿಗೆಯ್ದರ್ ।
ಪಿಂದೆ ಮನಂ ಬೇವ ತೆಱದೆ ಕೇಡೆಸಗಿದೊಡಂ ॥
ಅಂದಿನುಪಕೃತಿಯುನೆಣಿಪೊಡೆ ।
ನಂದುಗುಮವರಿಂದಮಾದ ಬೇಗುದಿಯೆಲ್ಲಂ ॥ 79 ॥
ಆವಜನನಳಿದೊಡಂ ನರ ।
ನೋವಲ್ಕೆಡೆಯುಂಟು ಪಾಪದಿಂದಾತನನಂ ॥
ತೋವಲೆಡೆಯಿಲ್ಲ ಬಗೆಯೊಳ್ ।
ಭಾವಿಸದುಪಕೃತಿಯುನೆಟಿದ ಮನುಜನನೆಂದುಂ ॥ 80 ॥

---

## 12. ಪಕ್ಷಪಾತವಿಲ್ಲದಿರುವುದು.

ಅರಿಗಳ್ ಮಿತ್ರರುದಾಸೀ ।
ನರೆಂಬ ಮೂದೆಱದ ನರರೊಳಂ ನ್ಯಾಯದಿನೋ ॥
ಸರಿಸದೆ ವರ್ತಿಪ ನಡುನಿಲೆ ।
ಚಿರಂತನರ ಮತದಿಂ ಪೆಪರಮಧರ್ಮಮೆನಿಕ್ಕುಂ ॥ 81 ॥

ನ್ಯಾಯಮನುಳಿಯದನ್ನೈಸಿರಿ ।
ಬೀಯದೆ ಬೇಡಿದ ಸುಖಂಗಳಂ ಬೀಱುವಂ ॥
ಗಾಯುಷ್ಯಾಂತಂಬರಮನ ।
ಪಾಯಾಶ್ರಯಮಕ್ಕುಮವನ ಸಂತಾನಕ್ಕಂ ॥ 82 ॥

ಸೊಗಮಂ ದೊರೆಕೊಳಿಸುವೊಡಂ ।
ಸುಗುಣಗರ್ಗ್ಗದೇಯಮಾಗದೆಂದುಂ ನ್ಯಾಯಾ ॥
ಪಗತಪ್ರವೃತ್ತಿಯಿಂ ತಮ ।
ಗೊಗೆವೊಡೆ ಸಂಪತ್ತಿ ಲೇಸು ಬಡತನಮುದಱಿಂ ॥ 83 ॥

ನಡುನೆಲೆಯುಳ್ಳರಿವಂದಿರ್ ।
ನಡುನೆಲೆಯಿಲ್ಲದರಿವಂದಿರೆಂಬುದು ತಿಳಿಯ ॥
ಲ್ಪಡುಗುಂ ನೆಟ್ಟನೆವಂದಿರ್ ।
ಪಡೆದ ಸುಸಂತತಿಯಿನದಱಭಾವದಿನಿಳೆಯೊಳ್ ॥ 84 ॥

ಪಿಂದಣ ಕರ್ಮದ ಕತದಿಂ ।
ಕುಂದುಂ ಪೆರ್ಚುಂ ನರಂಗೆ ಸಂದಿಸುಗುಮವಂ ॥
ನಂದಿಸಲೊಂದಿಸಲೆಂದೆರ್ದೆ ।
ಯಿಂದಂ ಕಳೆವನೆ ವಿವೇಕಿ ನಡುನೆಲೆದೊಡವಂ ॥ 85 ॥

ಸಮದರ್ಶಿತ್ವಮೆನಿಪ್ಪು ।
ತ್ತಮಧರ್ಮಮನುಳಿದು ಪಕ್ಷಪಾತಮನೊರ್ವಂ ॥
ಸಮೆಯಲ್ಕೆ ಬಗೆದೊಡಾ ಬಗೆ ।
ಯೆ ಮುಂದವಂಗೊಗೆವ ಕೇಡನಱಿಪುತ್ಪಾತಂ ॥ 86 ॥

ಸಮದರ್ಶಿಯಾಗಿ ಧರ್ಮದೊ |
ಳಮರ್ಕ್ಕೆಯಿಂ ನಿಂದ ಸಚ್ಚರಿತ್ರಂಗೇನಾ ||
ನುಮೆಡರ್ ಸಮನಿಸುವೊಡದಂ |
ಸುಮತಿಗಳಾತಂಗೆ ಕೊಱತೆಯೆಂದೆಣಿಸುವರೇ || 87 ||
ಕೆಲಕೊಲೆಯದೆ ಸಮಮಾಗಿಯೆ |
ನಿಲುತಱುಪುತೆ ತೂಗಿ ಗುರುತೆಯಂ ನ್ಯಾಯ್ಯತೆಯಂ ||
ಕಲಿಪ ತುಲೆಯಂತೆ ನರನೊ |
ರ್ಕೆಲಕೊಲೆಯದೆ ನಿಂದು ತಳೆಗೆ ಸಮದರ್ಶಿತೆಯಂ || 88 ||
ನಡುನೆಲೆಯೆಂಬುದು ಸೊಲ್ಲಿಪ |
ನುಡಿಯೊಳ್ ನೆಲೆಗೊಂಡ ಋಜುತೆಯಲ್ಲದೆ ಪೆಱತೇ ||
ನೊಡನಾಡಿಯಾದೊಡದು ಮನ |
ದೆಡೆಯೊಳ್ ನೆಲೆಗೊಂಡ ಋಜುತೆಗೆಡೆವಿಡದೆಂದುಂ ||89 ||
ಪರರ ಪದಾರ್ಥಂಗಳುಮಂ |
ಪರದರ್ ತಮ್ಮಯ ಪದಾರ್ಥದಂತಿರೆ ಮನದೊಳ್ ||
ಪರಿಭಾವಿಸಿ ಪರಿಪಾಲಿಸಿ |
ಪರದುಗೆಯಲ್ಕೆಳಸೆ ಪರದು ನಲ್ವರದಕ್ಕುಂ || 90 ||

---

## 13. ಆತ್ಮಸಂಯಮ.

ತ್ರಿದಶರ ಲೋಕಕೆ ಕೊಂಡು |
ಯ್ವುದಾತ್ಮಸಂಯಮಮೆನಿಪ್ಪ ಧರ್ಮಂ ನರನಂ ||
ಪುದಿದಂಧತಮಸಕೆಪೆದು |
ಯ್ವುದು ಕೇಳ್ ಸ್ವೈರಪ್ರವೃತ್ತಿಯೆಂಬಘಮವನಂ || 91 ||

ಧರೆಯೊಳ್ ವಶಿತ್ವದಿಂದಂ ।
ಪಿರಿದೆನಿಸುವ ಸಂಪದಂ ನೆರಂಗಿಲ್ಲದಱಿಂ ॥
ಪರಮಾದರದಿಂ ನಿಧಿಯುಂ ।
ತಿರದಂ ಕಾಪಿಡುಗೆ ಕಿಡದ ಮಾಳ್ಕೆಯಿನೆಂದುಂ ॥ 92 ॥

ಅಱಿವಿಂಗೆ ಫಳಂ ದಮಮುಂ ।
ದಱಿದಿಂದ್ರಿಯತತಿಗಧೀನನಾಗದೆ ವಶದೊಳ್ ॥
ನಿಱಿಸಿ ನೆಗಳ್ದಂಗಾ ದಮ ।
ಮಱಿದರೊಳರ್ಹಣೆಯನುಂಟುಮಾಳ್ಪುದು ಪಿರಿದೇ ॥ 93 ॥

ನಿಂದು ಗೃಹಸ್ಥಾಶ್ರಮದೊಳ ।
ಗೊಂದಿದ ಸಂಸಾರಸುಖಮನನುಭವಿಸುತ್ತಿ ॥
ರ್ಪಂದುಂ ವಶಿಯೆನಿಸಿದನೊಳ್ ।
ಸಂದುನ್ನತಿ ಮಿಗಿಲೆನಿಕ್ಕುಮುಗದುನ್ನತಿಯಿಂ ॥ 94 ॥

ವಿನಯಗುಣಮಿಳೆಯೊಳೆಲ್ಲಾ ।
ಜನಕಂ ಸುಖಜನಕಮಕ್ಕುಮೆಂಬುದು ನಿಸದಂ ॥
ಧನವಂತರೊಳಾಗುಣಮಿರೆ ।
ಜನಮವರ್ಗೈಸಿರಿಗದೊಂದು ಸಿರಿಯೆಂದೆಣಿಕುಂ ॥ 95 ॥

ಅಂಗಂಗಳನೊಳಗಾವೆಯು ।
ಡಂಗಿಸುವವೊಲೊಂದು ಭವದೊಳಿಂದ್ರಿಯತತಿಯಂ ॥
ಪಿಂಗದೆ ಜಯಿಸಿ ಬಸಂಗೆ ।
ಯ್ದುಂಗೇಟುಂ ಭವದೊಳಾ ಜಯಂ ಸರಣಕ್ಕುಂ ॥ 96 ॥

ಕಾಯಲ್ವೇಡಿದುದನಿತಂ ।
ಕಾಯಲ್ಕಾಱದೊಡಮೆಯ್ದ ನಾಲಗೆಯೊಂದಂ ॥
ಕಾಯಲ್ವೇೞ್ಪುದು ಮನುಜಂ ।
ಕಾಯದೊಡದು ದುಃಖಜಾಲದೊಳ್ ತೊಡರಿಸುಗುಂ ॥ 97 ॥

ಆಡುವ ಮಾತುಗಳಿಂದಂ ।
ಕೇಡೊಂದಾನುಂ ಪೆಱರ್ಗ್ಗೆ ಸಮ್ಮನಿಪೊಡೆ ತಾಂ ॥
ಮಾಡಿದ ನಲ್ಮೆಯನಿತ್ತುಂ ।
ಪಾಡೞಿದಪಕೀರ್ತಿವೆತ್ತು ಪೊಲ್ಲಮೆಯಕ್ಕುಂ ॥ 98 ॥

ಕಿಸುಗೆಣ್ಚೆ ಮೆಯ್ಯೊಳಗ್ನಿಯಿ ।
ನೆಸಗಿದ ಗಾಯಂಗಳಾಱಿದಪ್ಪುವು ಭೋಂಕಲ್ ॥
ರಸನೆಯಿನೊಡರಿಸಿದೆರ್ದವು ।
ಕ್ಣಸುವಿರ್ಪನ್ನೆವರಮಾಱದೊದವಿಕುಮುಬಿಲಂ ॥ 99 ॥

ಪಡೆದು ಕಲಾಪರಿಣತಿಯಂ ।
ಕುಡದಾಸ್ಪದಮಂ ಕನಲ್ಕೆಗಿನಿಸುಂ ಮನದೊಳ್ ॥
ಬಿಡದಾತ್ಮಜಯಮನೊಂದಿದ ।
ನೆಡೆಯಂ ಸಾರಲ್ಕೆ ಸಮಯಮುಂ ಪಾರ್ಗುಮಱಂ ॥ 100 ॥

---

## 14. ಆಚಾರ (ನಡೆವಳಿ).

ಪೊಡವಿಯೊಳಾಚಾರಂ ದೊರೆ ।
ವಡೆದುನ್ನತಿಯಂ ನರಂಗೆ ಸಾರ್ಚುಗುಮದಱಿಂ ॥
ದೆಡೆವಿಡದೆ ನೇರಿದರ್ ಕಾ ।
ಪಿಡುವರದಂ ತಮ್ಮ ಜೀವಕಂ ಮಿಗಿಲೆನುತುಂ ॥ 101 ॥

ತನಗಿಹಕಂ ಪರಕಂ ಸಾ ।
ಧನಮಪ್ಪಜನಾವುದೆಂದು ಪರಿಶೀಲಿಸಿ ನೋ ।
ಟ್ಪಿನೆನಮಾಚಾರಮುದಪ್ಪುದ ।
ಱನೆದಂ ನೆರನೋಽಪಿ ಕಾವುದಾದರದಿಂದಂ ॥ 102 ॥

ಉನ್ನತಕುಲದೊಳ್ ಪುಟ್ಟಿದ ।
ನುಂ ನಡೆವಳಿ ಪೊಲ್ಲದಾಗೆ ನೀಚನೆನಿಕ್ಕುಂ ॥
ಸನ್ನುತಚಾರಿತ್ರಮೆ ನೋ ।
ಟ್ಪಿನ್ನಂ ಮನುಜನ ಕುಲೀನತೆಗೆ ಕುಱಿಪಕ್ಕುಂ ॥ 103 ॥

ಓದಿದ ವೇದಮನೆಲ್ಲಂ ।
ಭೂದೇವಂ ಮಱೆತೊಡಂ ಪ್ರಮಾದದೆ ಮಗುೞ್ದಾ ॥
ವೇದಮನೋದಲ್ಕಕ್ಕುಂ ।
ಪೋದೊಡೆ ಚಾರಿತ್ರಮವನ ವಿಪ್ರತೆ ಕಿಡದೇ ॥ 104 ॥

ಪೆಱರೊಳ್ಪಂ ಕಂಡೆರ್ದೆಯೊಳ್ ।
ಮಱುಗುವ ನರನತ್ತಣಿಂದೆ ಸಿರಿ ತೊಲಗುವವೋ ॥
ಲಱಿವಿಲ್ಲದೆ ನಡೆವಳಿಯಂ ।
ತೊಱೆವವನಿಂದುನ್ನತಿಕ್ಕೆ ತೊಲಗಿದಪುದು ಕೇಳ್ ॥ 105 ॥

ಆಚಾರಭ್ರಷ್ಟತೆಯಿಂ ।
ನೀಚೈರ್ಗತಿಯುಪ್ಪುದೆಂದು ತಿಳಿದಿರ್ಪುದಱಿಂ ॥
ದಾಚರಿಸಲ್ಕರಿದಪ್ಪೊಡ ।
ಮಾಚಾರಮನುಟಿಯರಾರ್ಯರಚಳಿತಧೈರ್ಯರ್ ॥ 106 ॥

ಸಚ್ಚರಿತಮೆಂಬ ಮಾಣಿಕ |
ವಚ್ಚದಿನುತ್ಕರ್ಷಮೊಗೆಗುಮಾರ್ಗ್ಗಂ ತಿಳಿದರ್ ||
ಮೆಚ್ಚದ ದುಶ್ಚರಿತದಿನಾ |
ಪಚ್ಚಯುಮುಂ ಪಟಿಯುಮೊದವಿ ಬಳೆಯಿಕುಮುಟಿಲಂ ||107||

ಬಿತ್ತಾಗಿ ಪುಣ್ಯಕೊದವಿಕು |
ಮುತ್ತಮಸುಖಮಂ ಸುವೃತ್ತಮಿಹಕಂ ಪರಕಂ ||
ಬಿತ್ತಾಗಿ ಪಾತಕಕೆ ದು |
ರ್ವೃತ್ತಂ ಪುಟ್ಟಿಸುಗುಮುಟಿಲನಿಹಕಂ ಪರಕಂ ||108||

ಸುರುಚಿರಚಾರಿತ್ರದಿನೀ |
ಧರಣಿಗೆ ಭೂಷಣಮೆನಿಪ್ಪ ಪಿರಿಯರ್ ಮುಱಿದುಂ ||
ಪರರ ಹೃದಯಕ್ಕೆ ನೋವಂ |
ದೊರೆಕೊಳಿಸುವ ನಿಷ್ಠುರೋಕ್ತಿಗಳನುಚ್ಚರಿಸರ್ || 109 ||

ಲೋಕವ್ಯವಹಾರಮೆನಿ |
ಪ್ಪೀ ಕಲೆಯುಂ ಕಲ್ಲದಿರ್ಪ ಮನುಜರ್ ಪೆಱವಂ || ✓
ಸಾಕಲ್ಯದೆ ಕಲ್ತಿರ್ದೊಡ |
ಮಾ ಕಲ್ಪಿಯಿನೇನವಂದಿರಱಿಯುದರೆ ವಲಂ || 110 ||

---

## 16. ಸ್ವೈರಣೆ.

ಅವಿವೇಕಿಗಳಸನಸದಿಂ |
ದವಧೀರಣೆಗೆಯ್ದು ಪಟಿಯೆ ಬಗೆಗುಂದದಣಂ ||
ಬುವಿ ತನ್ನನಗಟ್ವಿರಂ ತಾಂ |
ಗುವವೋಲ್ ಸ್ವೈರಿಪುದು ಗುಣದೊಳಗ್ಗಳಮೆನಿಕುಂ || 111 ||

ಪ್ರತಿಕರಿಸಲಾರ್ಪೊಡಂ ಪೆಱ |
ರತಿಕ್ರಮಂಗಳನಮರ್ಕ್ಕೆಯಿಂ ಸೈರಿಸು ಮಾ ||
ನ್ಯತರಂ ಸೈರಣೆಯಿಂದಂ |
ಸ್ಮೃತಿಪಥದಿಂದಂದೆ ಬಿಡದೆ ತೊಲಗಿಪ್ಪುದವಂ || 112 ||

ಎಡೆಗೆಯ್ದಿದ ಬಿರ್ದಿನರಂ |
ಕಡೆಗಣಿಪುದು ನೋಡೆ ಬಡತನಂ ಬಡತನದೊಳ್ ||
ಜಡಮತಿಗಳೆಸಗಿದೆಡರಂ |
ತಡೆಯದೆ ಸೈರಿಪುದು ಬಲ್ಮೆ ಬಲ್ಮೆಯೊಳೆನಿಕುಂ || 113 ||

ತನ್ನೊಳ್ ಬೆಚ್ಚವೊಲೆಂದುಂ |
ಸನ್ನಿದಮಾಗಿರ್ಕೆ ಪೆರ್ಮೆಯೆಂದೆಳಸುವವಂ ||
ತನ್ನ ನಡೆವಳಿಯೊಳಾವಗ |
ಮುನ್ನಿದ್ರತೆಯಿಂದೆ ಕಾಪಿಡುಗೆ ಸೈರಣೆಯಂ || 114 ||

ಪ್ರತಿಕರಿಸುವರಂ ಕಡೆಗ
ಣ್ಚುತೆ ಪುಲ್ಗಂ ಕಷ್ಟಮಾಗಿ ನೆನೆವರ್ ಮನದೊಳ್ ||
ಕತಿಗೊಳ್ಳದೆ ಸೈರಿಪರಂ |
ರತುನಂಗಂಡಂತೆ ಕೊಂಡುಕೊನೆವರ್ ಪಿರಿಯರ್ || 115 ||

ಮಸಗುತೆ ಮುಯ್ಯೆಸಪಗ್ರ್ವದ |
ಯಿಸುವುದು ನೋಡಲೊಡಮೊಂದೆ ದಿನದ ಸುಖಂ ಸೈ ||
ರಿಸುವಗ್ರ್ವದಯಿಸುವ ಜಸಂ |
ರಸೆಯೊಳ್ ನೆಲಸುವುದು ಕಲ್ಪಕಾಲಂಬರೆಗಂ || 116 ||

ತಗದೆನಿಸುವ ಪೊಲ್ಲಮೆಯಂ |
ನೆಗೞ್ಚಿದಂ ಮುಂದೆ ಪಡುವ ಸಂಕಟಕೆನಸುಂ ||
ಬಗೆನೊಂದವನೊಳ್ ಧರ್ಮಾ |
ಪಗತಮನೇನುಮನೊಡರ್ಚದಿರ್ಪುದು ಯುಕ್ತಂ || 117 ||

ತಮಗೆ ಕಡುಸೊರ್ಕಿನಿಂ ಪೊ |
ಲ್ಲಮೆಯಂ ಮಾಡಿದ ದುರಾತ್ಮರಂ ಕ್ಷಮೆಯೆಂಬು ||
ತ್ತಮವಾದ ಕೆಯ್ದುವಿಂದಂ |
ಶ್ರಮಮಿಲ್ಲದೆ ಗೆಲ್ಗೆ ವಿಮಲಮತಿಗಳ್ ಧರೆಯೊಳ್ || 118 ||

ಇನಿಸುಂ ಬಗೆನೋಯದೆ ದು |
ರ್ಜನರ ದುರುಕ್ತಿಗಳನಿರದೆ ಸೈರಿಸುವನಘರ್ ||
ಮನೆಯೊಳ್ ವಾಸಿಪ್ಪೊಡಮೇಂ |
ವನವಾಸಿಗಳಪ್ಪ ಋಷಿಗಳಂತಿರೆ ಶುದ್ಧರ್ || 119 ||

ಪಸಿವಂ ಬೞಲ್ಕೆಯಂ ಸೈ |
ರಿಸುತುಂ ನೋಂಪಿಗಳನಾಚರಿಸುವರ್ ಪಿರಿಯರ್ ||
ಪಿಸುಣರ ಬಿಱುನುಡಿಯಂ ಸೈ |
ರಿಸುವವರವರತ್ತಣಿಂದೆ ಪಿರಿಯರ್ ದಿಟದಿಂ || 120 ||

---

## 17. ಕರುಬದೆ ಇರುವುದು.

ಪೆಱರೊಳ್ಪಂ ಕಂಡೆರ್ದೆಯೊಳ್ |
ಕಱುಂಬದಿರ್ಪಮಲಗುಣಮನಾವಗಮೊರ್ವಂ ||
ತೊಱೆಯದೆ ತನ್ನಾಚರಣಕ |
ಪಱಿಕೆಯ ಕುಱಿಪೆನಿಪ ತೆಱದೆ ನೆಗೞ್ವೇೞ್ಕುಂ || 121 ||

ಕೆಳೆ ಪಗೆಯೆಂಬೀ ಭೇದವು |
ನೊಳಕೊಳ್ಳದದಾರೊಳಾದೊಡಂ ಮತ್ಸರಮಂ ||
ತಳೆಯದಿರಲಾರ್ಪೊಡದೆ ತನ |
ಗೆಳವಡುವೊಳ್ಪುಗಳೊಳೆಲ್ಲಮುಗ್ಗಳಮೆನಿಕುಂ || 122 ||

ಪರರ್ಗೈಸಿರಿಯಂ ಕಂಡೊಲ |
ವರಮನೆಣಂ ತಳೆಯದಟ್ಕಜಂಬಡುವವರ್ಗೈ ||
ಸಿರಿಯುಂ ಧರ್ಮಮುಮಿಹಕಂ |
ಪರತ್ರೆಗಂ ತಮಗೆ ಬೇಡಮೆಂಬರ್ ನಿಸದಂ || 123 ||

ತಿಳಿದು ತಮಗಿಹದೊಳಂ ಪರ |
ದೊಳಮಟ್ಕಜದಿಂದೆ ಪುಟ್ಟುವದವಟಲಂ ನಿ ||
ರ್ಮಳಗುಣರಸೂಯೆಯಿಂದಾ |
ಏಳರಾಗುತ್ತೆಸಗರಾರೊಳಂ ಪೊಲ್ಲಮೆಯಂ || 124 ||

ಪಗೆಯಿಂ ಬಟ್ಟಂಕಿದೊಡಮೇಂ |
ಬಗೆಯೊಳ್ ಮಾತ್ಸರ್ಯಕೆಡೆಯನಿತ್ತೊಡೆ ಸಾಲ್ಗುಂ ||
ಪಗೆ ಬೇಱೆ ಬೇಡಮುದೆ ನೆ |
ಟ್ಟಗೆ ಮಾಟ್ಕುಂ ಪಗೆಯಿನೊಗೆವ ಕೇಡನನಿತ್ತಂ || 125 ||

ಎರೆವರ್ಗ್ಗೆ ಚಾಗಿಯೊಲವಿಂ |
ಪುರುಳಂ ಕುಡುವಾಗಳಟ್ಕಜಂಬಡುವಾತಂ ||
ಧರಿಸಲುಣಲುಡೆಯುಮುಣಿಸುಂ |
ದೊರೆಕೊಳ್ಳದಟಲ್ವನಿಷ್ಟಬಂಧುಸಮೇತಂ || 126 ||

ಪರರ್ಶ್ವೈಸಿರಿಯಂ ಕಾಣುತೆ ।
ಪಿಱಿದುಂ ಮಚ್ಚರಿಸುವಂಗೆ ಸರಸೀರುಹಮುಂ ॥
ದಿರೆಯಿಂದಿರೆ, ತಾನುಂ ಮ ।
ಚ್ಚರಿಸುತ್ತಕ್ಕಂಗೆ ತೋಱಿಯುವನಂ ಬಿಡುವಳ್ ॥ 127 ॥

ಸರಿಯಾವುದುಮಿಲ್ಲದ ಮ ।
ತ್ಸರಮೆಂಬಾ ಪಾಪಿ ತನಗೆ ನೆಲೆಯಾದವನ್ಗೆ ॥
ಸಿರಿಯಂ ಕಿಡಿಸುಗುಮಿಹದೊಳ್ ।
ನರಕಕ್ಕೆಡೆದುಯ್ದು ನಿಲಿಕುಮವನಂ ಪರದೊಳ್ ॥ 128 ॥

ಪರರೊಳ್ಪಂ ಕಾಣುತೆ ಮ ।
ಚ್ಚರಿಸುವ ನೀಚರ್ಗೆ ಸಿರಿಯುಮುಮುಲರ್ಗ್ಗೆಡರುಂ ॥
ದೊರೆಕೊಳ್ಳವು ದೊರೆಕೊಂಡೊಡೆ ।
ಸಿರಿಯರದಂ ಪೂರ್ವಕರ್ಮಫಲಮೆಂದೆಣಿಪರ್ ॥ 129 ॥

ಸಿರಿದುಮಸೂಯೆಯಾವಿಲಚಿ ।
ತ್ತರೊಳಾರುಂ ಪೆರ್ಮೆವಡೆದರಿಲ್ಲಮಸೂಯಾ ॥
ವಿರಹಿತಚಿತ್ತರೊಳಾರುಂ ।
ಪರಿಕಿಸುವೊಡೆ ಪೆರ್ಮೆಯಿಂದೆ ನೀಗಿದರಿಲ್ಲಂ ॥ 130 ॥

---

## 18. ಲೋಭವಿಲ್ಲದಿರುವುದು.

ಪೆಱರರ್ಥಕೆ ಕೆಯ್ದುಡುಕುವು ।
ದಱನಲ್ತೆಂಬಱಿವನುಱಿದು ನರನಳಿಪಲೊಡಂ ॥
ಪೆಱರ ಸದರ್ಥಕ್ಕಾಸ್ಪೃಹೆ ।
ತಱಿಗುಂ ಕುಲತರುವನೊದವಿಕುಂ ಕೋಟಲೆಯಂ ॥ 131 ॥

ಪರರ ಪುರುಳಿಂದೆ ತಮಗ ।
ಪ್ಪುರುಲಾಭಕ್ಕೆಳಸಿ ಕೆಯ್ಕೊಳಲ್ಕದನೆಂದುಂ ॥
ವಿರಚಿಸರಟಿಗೆಯ್ತ್ತಗಳಂ ।
ಪಿರಿದುಮಧರ್ಮಕ್ಕೆ ನಾಣ್ಚುವನವದ್ಯಗುಣರ್ ॥ 132 ॥

ಅನ್ಯರ ವಸುವಿಂದೊಗೆವ ಜ ।
ಘನ್ಯಸುಖಕ್ಕೆಳಸಿ ಲೋಭದಿಂದವರೊಳ್ ಸೌ ॥
ಜನ್ಯಮನುಟಿದೆಸಪರೆ ಪೇ ।
ಬನ್ಯಾಯಮನನುಪಮಾತ್ಮಸುಖಕಾಟಸುವರ್ ॥ 133 ॥

ಬಡವರಿವೆನುತುಂ ತಮ್ಮಯ ।
ಬಡತನಮುಂ ಪಿಂಗಿಸಲ್ಕೆ ಲೋಗರ ಪುರುಳಂ ॥
ಸಡಗರಿಸಿ ಸೆಳೆಯಲೆಳಸರ್ ।
ಬಿಡದಿಂದ್ರಿಯತತಿಯನುಡಿದ ವಿಮಳಪ್ರಜ್ಞರ್ ॥ 134 ॥

ಅಱಿದರುಮಂ ಮೆಚ್ಚಿಪ ಕೂ ।
ರಱಿವಿಂಗಾಗರಮೆನಿಪ್ಪೊಡಂ ಫಲಮೇಂ ತ ॥
ನ್ನಱಿವಿಂಗೆ ತಗೆದ ಕಜ್ಜಮ ।
ನುಱದಾರೊಳಮೆಸಪೊಡರ್ಥಲೋಭದೆ ಮನುಜಂ ॥ 135 ॥

ಪರದೊಳ್ ಶಾಶ್ವತಸುಖಮಂ ।
ದೊರೆಕೊಳಿಪ ಗೃಹಸ್ಥಧರ್ಮದೊಳ್ ನಿಂದ ನರಂ ॥
ಪರಧನಮುಂ ಬಯಸಿಯುದಂ ।
ಬರಿಸಲ್ ದುರುಪಾಯಚಿಂತೆಯುಂ ಗೆಯ್ಯಲಟಿವಂ ॥ 136 ॥



ಪರರ ಧನಕೆಳಸಿಯದನೆಪ |
ಹರಿಪುದಱಿಂದಪ್ಪ ಸಿರಿಗೆ ಕೂರಲ್ವೇಡಂ ||
ತರಹರಿಸಲಾಗದೇವದ |
ಹರವರಿಯಂ ಪಡೆದು ನಿನ್ನನಟಲಿಕುಮದು ಕೇಳ್ || 137 ||

ಕುಂದುವ ಗುಣಮುಳ್ಳೈಸಿರಿ |
ಕುಂದದೆ ನೆಲಸಿರ್ಪುದಕ್ಕೆ ಪರವಿತ್ತಕ್ಕಾ ||
ವಂದದೊಳಮೆಳಸದಿರ್ಪುದ |
ಱಿಂದಂ ಪೆಱತುಂಟೆ ಕಾರಣಂ ಭೂತಳದೊಳ್ || 138 ||

ಅಱಿನಲ್ತು ಪೆಱರ ಪುರುಳಂ |
ಪೆಱಲಾಟಪುದೆಂದು ತಿಳಿದು ಸಮದರ್ಶಿತೆಯಂ ||
ಮೆಱೆವವಱಿದರೆಡೆಯನೆಯ್ದಲ್ |
ತೆಱಪಂ ಪಾರ್ದಿರ್ಕ್ಕುಮಂಬುಜಾಕ್ಷಕಳತ್ರಂ || 139 ||

ಪಿಂ ಬಳಿವ ಕೇಡನೆಣಿಸದೆ |
ಮುಂಬರಿದನ್ಯರ ಪುರುಳ್ಗೆ ಕೆಯ್ದುಡುಕುವನಾ ||
ದಂ ಬನ್ನಂಬಡುವನಲೋ |
ಭಂ ಬೀಱದೆ ಜನಕೆ ಜಯಮನೆಲ್ಲಿಯುಮಿಳೆಯೊಳ್ || 140 ||

---

## 19. ಚಾಡಿಹೇಳದಿರುವುದು.

ನುಡಿಯುಬಱನೆಂಬ ನುಡಿಯಂ |
ತಡೆಯದೆ ತಗದೆನಿಪ ಕಜ್ಜಮಂ ಮಾಡಿದೊಡಂ ||
ಪಡೆವೊಡಿವಂ ಪಿಸುಣಾಷಂ |
ಗಡಮೆಂಬೊಳ್ಜಸಮನದುವೆ ಶಾವುದು ನರನಂ || 141 ||

ಅಱಿಸಿಲ್ಲವೆಂದು ಕಿಡೆನುಡಿ ।
ದಱಿನಲ್ಲದ ಪಾಪಕೃತ್ಯಮಂ ಮಾಳ್ಪುದಱಿಂ ॥
ಪೆಱಗೆಟಿಯೆ ನುಡಿದು ಕಪಟದೆ ।
ಕಿಱುನಗೆಯಂ ಮುಂದೆ ಬೀಱುವುದು ಪೊಲ್ಲದು ಕೇಳ್ ॥142॥

ಪಿಂದೆ ಪಿಸುಣ್ಗೆಡೆದುಕ್ಕಿವ ।
ದಿಂದಿದಿರೊಳ್ ಕೊಂಡುಕೊನೆದು ಬಾಳ್ವುದಱಿಂದಂ ॥
ಪೊಂದುವುದು ಲೇಸನೊದವಿಕು ।
ಮೆಂದೊರೆವರ್ ಧರ್ಮಶಾಸ್ತ್ರಮಂ ಕಲ್ತುಱಿದರ್ ॥ 143 ॥

ಇದಿರೊಳ್ ದಾಕ್ಷಿಣ್ಯಮನುೞಿ ।
ದೊದಱಿದೊಡಂ ನಿಷ್ಠುರೋಕ್ತಿಯಂ ಪಲವಂ ಮುಂ ॥
ದೊದವುವ ದೋಷಮನಾರ ।
ಯ್ಯದೆ ನುಡಿಯಲ್ವೇಡಮೇನುಮಂ ಪಿಂಗಡೆಯೊಳ್ ॥ 144 ॥

ಪಿಸುಣಂ ಹಿತನಂತೆ ಪೆಱ ।
ಗ್ಗ್ರಸಗಿಂ ಧರ್ಮಮನೆನುತ್ತುಮುಪದೇಶಿಪೊಡಂ ॥
ಪಿಸುಣಾಡುವ ನೀಚಗುಣಂ ।
ಪಿಸುಣಾಡುಗುಮವನ ಕಪಟಪಟುತೆಯನಾಗ್ರ್ಗಂ ॥ 145 ॥

ಅನ್ನೆಯಮಿದೆನ್ನದೊರ್ವಂ ।
ಕೆನ್ನಂ ದೂಱಿಲೊಡಮೊರ್ವನಂ ಪಿಂಗಡೆಯೊಳ್ ॥
ಬನ್ನಂಬಡಿಸದೆ ಮಾಣ್ಬನೆ ।
ತನ್ನಂ ದೂಱಿದನನಟಿಯೆ ನುಡಿದಿದಿರೊಳವಂ ॥ 146 ॥

ಇನಿಸುಡಿಯುಸುಸಿರ್ದು ಪರರೊಳ್ |
ಮನುಗೊಳಿಪುದು ಸುಕರಮಾದೊಡಂ ಕೆಳೆತನಮಂ ||
ಮುನಿದು ಸರಿವಂತು ಬಾಂಧವ |
ಜನಮುಮದೇಕಕಟ ಪಿಂದೆ ಪಳಿವನೊ ಪಿಸುಣಂ || 147 ||
ಒಡವೆರೆದಾಪ್ತರುಮಂ ಪಿಂ |
ಗೆಡೆಯೊಳ್ ಪಳಿದವರ ದೋಷಮಂ ಪಲಬರೊಳಂ ||
ನುಡಿದು ಮನವೊಲ್ವ ಖಳರೇ |
ನೊಡರಿಸುವರೊ ಪೇಬಲರಿದು ಪರಜನದೆಡೆಯೊಳ್ || 148 ||
ಧರಿಪುದು ಸಮುಸ್ತವಸ್ತುವ |
ನೆರವಿಲ್ಲದೆ ತನಗೆ ಧರ್ಮಮುಪ್ಪುದಱಿಂದಂ ||
ಧರಿಕುಂ ಗೆಡ ಸರ್ವಂಸಹೆ |
ಪರರಂ ಪೞಗಿರ್ದು ಪಳಿವ ಪಿಸುಣರ ಪೊಱೆಯಂ || 149 ||
ಪರರೊಳ್ ದೋಷಂಗಳನಾ |
ದರದಿಂದಱಿಸುವವೊಲಾತ್ಮದೋಷಂಗಳುಮಂ ||
ಪರಿಕಿಸಿ ನೋಡುವೊಡಿಳೆಯೊಳ್ |
ನರರೇತಕ್ಕಿಂತು ದುಃಖಭಾಜನರಪ್ಪರ್ || 150 ||

---

## 20. ವ್ಯರ್ಥಾಲಾಪ.

ಅಱಿದರ್ ಕೇಳ್ದಿನಸುಂ ಬೇ |
ಸಱನೊಂದಿ ಜುಗುಪ್ಸೆವಡೆವ ತೆಱದಿಂದಾದಂ ||
ಬಱುವಾತುಗಳಂ ಸೊಲ್ಲಿಸು |
ವಱವಿಲ್ಲದನೆಲ್ಲರಿಂದೆ ತೆಗಳಿಪ್ಪಡುಗುಂ || 151 ||

ಚಿರಕಾಲದಿಂದೆ ಕೆಳೆಗೊಂ ।
ಡರೊಳತ್ಯಾಹಿತಮನಾಚರಿಪ್ಪುದಱಿಂದಂ ॥
ಪಿರಿಯರ ಪೊಱೆಯೊಳಿನಿತ್ತುಂ ।
ಪುರುಳಿಲ್ಲದ ಮಾತನಾಡುವುದು ಪೊಲ್ಲದು ಕೇಳ್ ॥ 152 ॥

ಅಸಮೀಚೀನಂ ನೀರಸ ।
ಮುಸಂಗತಂ ವಿಫಲಮೆನಿಪ ವಿಷಯಂಗಳನು ॥
ವಿರ್ಸಿ ಬಿಚ್ಚಟಿಸುವ ನುಡಿಗಳ್ ।
ಪಿಸುಣಾಢವೆ ಪೇೞಿ ನುಡಿವನವಿನೀತತೆಯಂ ॥ 153 ॥

ಪಲರೊಳ್ ನಿಸ್ಸಾರಂ ನಿ ।
ಷ್ಫಲಮೆನಿಸುವ ಮಾತನೊರ್ವನಾಡುವೊಡಾ ಮಾ ॥
ತೊಲಷಂ ಮಾಣಿಕುಮನರೊಳ್ ।
ನೆಲೆಯಾಗಿಕುಮವನನಘಕಮುಗಲಡ ಪೞಿಗಂ ॥ 154 ॥

ಸುಗುಣರ್ ಪುರುಳಿಲ್ಲದ ಮಾ ।
ತುಗಳಂ ಪಲರೊಳ್ ವಿವೇಕಮಿಲ್ಲದೆ ಪೇೞ ॥
ಲ್ತಗುಳ್ದೊಡೆ ತೊಲಗುಗುಮುಪರಿಂ ।
ಪೊಗೞ್ತೆವೆತ್ತುನ್ನತಿಕ್ಕೆಯುಂ ಮಾನ್ಯತೆಯುಂ ॥ 155 ॥

ಪಲರೊಳ್ ಬಱುಮಾತುಗಳಂ ।
ಪಲರ್ಮೆ ಬಿತ್ತರಿಸಿ ನುಡಿದು ಮನದೊಳಳುಂಬಂ ॥
ನಲಿವನನೇಂ ನರನೆಂಬುದೆ ।
ಪಲಾಲಮೆನವೇೞ್ಕುಮಾತನಂ ಮಾನಸರೊಳ್ ॥ 156 ॥

ನೀತಿಯೊಳಮರ್ಕ್ಕನಪೆಯದ |
ಮಾತುಗಳಂ ಪಿರಿಯರಾಡುವೊಡಮಾಡುಗೆ ಮ ||
ತ್ತಾತಂಗಳಾರೊಳಂ ಬಱಿ |
ವಾತುಗಳಂ ನುಡಿಯದಿರ್ಪುದೊಳ್ಳಿತದೆಂದುಂ ||157||
ಅನವದ್ಯಮಸಾಧಾರಣ |
ಮೆನಿಪ್ಪ ಲಾಭಮನಪೇಕ್ಷಿಪಱಿವಿಂಗೊಡೆಯರ್ ||
ಎನಸುಂ ಪ್ರಯೋಜನಂಗಳ |
ನನುಗೊಳಿಸದ ಪಸೆಯನಾರೊಳಂ ನುಡಿಯರಣಂ ||158||
ಭ್ರಮದ ತೊಡಗ್ಗೊಳಗಾಗದ |
ವಿಮಲಪ್ರಜ್ಞಾವಿಶೇಷದಿಂ ಶೋಭಿಸುವರ್ ||
ಪ್ರಮುಷಿತವಿವೇಕರಾಗು |
ತ್ತುಮಾರೊಳಂ ನಿಷ್ಪ್ರಯೋಜನೋಕ್ತಿಯನೊರೆಯರ್||159||
ನುಡಿವೊಡೆ ನುಡಿಯೊಳ್ ಪುರುಳಿಂ |
ದೊಡಗೂಡಿ ಜನೋಪಕಾರಿಯಾದೊಳ್ನುಡಿಯಂ ||
ನುಡಿಗಿನಿಸುಂ ಪುರುಳಿಲ್ಲದ |
ನುಡಿಯುನಮಾನ್ಯತೆಗೆ ಪಡಿಯುನುಟಿಗಱಿವುಳ್ಳಂ ||160||

---

## 21. ಪಾಪಕ್ಕೆ ಹೆದರುವುದು.

ಪಾಪಕ್ಕೆ ಸುಗಿದು ನಡುಗುವ |
ರೇಪೊಟ್ಟುಂ ಪಾಪಕೃತ್ಯಮುಱಿಯದ ವಿಮಳರ್ ||
ಪಾಪಕ್ಕಂಜುವರೇ ಪೇ |
ಟೇಪೊಟ್ಟುಂ ಪಾಪಕೃತ್ಯದೊಳಗಟ್ಟಿ ಖಳರ್ ||161||

ಸೊಗೆಮಂ ಪುಟ್ಟಿಕುಮೆನುತುಂ।
ಬಗೆದೆಸಗುವ ಪಾಪಕೃತ್ಯಮೆಸಪಂಗೆಂದುಂ ॥
ದುಗುಡಮನೆ ಪುಟ್ಟಿಪುದಱಿಂ ।
ದಗಿವರದಕ್ಕಾರ್ಯರಗಿಯರಂತುರಿವುರಿಗಂ ॥162॥

ತಮಗೆೞಲನುಂಟುಮಾಡುವ ।
ವಿಮತರೊಳಂ ಪೊಲ್ಲಕೆಯ್ಯದಿರ್ಪುದು ಮನುಜ ॥
ರ್ಗ್ಗಮಲಜ್ಞಾನಂಗಳೊಳೆ ।
ಲ್ಲಮುತ್ತಮಜ್ಞಾನಮುಕ್ಕುಮೆಂಬರ್ ಪಿರಿಯರ್ ॥163॥

ಅೞಲಂ ಪೆಱಂಗೆ ದೊರೆಕೊಳೆ ।
ಪಟಿಗೆಯುತ್ತಮನೆಸಗಲೆಣಿಸವೇಡೆಣಿಪೊಡೆ ಕೇ ॥
ಳೞಲಂ ನಿನಗೊದವಿಪ ಪು ।
ಚ್ಚಟಿಯನೊಡರ್ಚಲ್ಕೆ ನೆನೆಗುಮಾಗಳೆ ಧರ್ಮಂ ॥ 1 64 ॥



ಬಡವನೆನೆಂದೊರ್ವಂ ಪೆಱ ।
ರೆಡೆಯೊಳ್ ಪೊಲ್ಲಮೆಯನೆಸಗೆಡಿರ್ಕ್ಕೆಸಗಿದೊಡಾ ॥
ಬಡತನಮುಗೆಲ್ಗುಮೇ ದಾಂ ।
ಗುಡಿವಿಟ್ಟಗ್ಗಲಿಸಿ ಬಳೆದು ಮಱುಗಿಕುಮವನಂ ॥ 165 ॥

ದುರಿತಂಗಳ್ ತನ್ನಂ ಬಿಟಿ ।
ಕರೆಯಟ್ಟಿಯುಬಿಲ್ಲ ವೇಡಮೆಂದೆಳಸುವವಂ ॥
ಪರರೆಡೆಯೊಳ್ ಪೊಲ್ಲಮೆಯುಂ ।
ವಿರಚಿಪುದಂ ಮಾಣ್ಗೆ ಸರ್ವಕಾಲಂಗಳೊಳಂ ॥ 166

ಅೞಿಯದೆ ಪೆಱವಗೆಯಿಂ ನರ ।
ನುೞಿಯಲ್ಕೆಂತಾನುಮಕ್ಕುಮಾದುಷ್ಕೃತಮುಂ ॥
ಬೞಿವಗೆ ಬಿಡದವನಂ ಬೆಂ ।
ಬೞಿವಿಡಿದಾಟಂದು ಕೊಂದು ಕೂಗಿಯೆ ಮಾಣ್ಗುಂ ॥ 167 ॥

ನಿಡಿದಾಗಿ ದೂರಕೆಯ್ದಿಯುಂ ।
ಮುಡಿಯಂ ಬಿಡದಿರ್ಪ ನೆೞಲವೋಲ್ ಪರರೊಳ್ ಕೇ ॥
ಡೊಡರಿಸಿದರ್ಗ್ಗಾಗಳೆ ಎಡ ।
ಱಡಸದೊಡಂ ಬಿಡದೆ ಬೆನ್ನೊಳಿರ್ಕ್ಕುಂ ದಿಟದಿಂ ॥ 168 ॥

ಪರದುಃಖೋತ್ಪಾದನಮಾ ।
ತ್ಮರಕ್ಷೆಯಲ್ತಾತ್ಮದುಃಖಬೀಜಾಪಾಪಂ ॥
ನತರದಱಿಂ ಪೆಱರೆಡೆಯೊಳ್ ।
ನಿರುಪದ್ರವರಕ್ಕೆ ತಮಗೆ ತಾಂ ಕೂರ್ಪ್ಪೊಡಣಂ ॥ 169 ॥

ನೀತಿಯಮಾರ್ಗಮನುೞಿಯುತ ।
ನೀತಿಯಮಾರ್ಗದೊಳೆ ಸಂದು ಕೇಡಂ ಲೋಗ ॥
ರ್ಗ್ಗೀತೆಱದಲ್ಲಿಯುಮೊಡರಿಸ ।
ದಾತಂ ದುಃಖಕ್ಕೆ ದೂರನಪ್ಪುದು ನಿಸದಂ ॥ 170 ॥

---

## 22. ಪರೋಪಕಾರ.

ಪಿರಿಯರ್ ತಾವೊಸೆದೆಸಗುವ ।
ಪರೋಪಕಾರಕ್ಕೆ ಪಾರರೆಂದುಂ ಮುಯ್ಯಂ ॥
ಧರೆಗನುಪಮಸುಖಮುಂ ಬಿ ।
ತ್ತರಿಸುವ ಧಾರಾಧರಕ್ಕೆ ಮುಯ್ಯಾವುದು ಪೇೞ್ ॥ 171 ॥

ಪಿರಿಯರ್ ಬೞಲ್ದು ಗೞಿಯಿಪ ।
ಪುರುಳೆಲ್ಲಕ್ಕಂ ಪರೋಪಕಾರಮೆ ಫಲಮು ॥
ನ್ಯೆರ ಪುರುಳವೊಲಾತ್ಮೋದರ ।
ಭರಣಕ್ಕಂ ಬಯ್ತಿರಿಪ್ಪುದರ್ಕ್ಕಮದಲ್ಲಂ ॥ 172 ॥

ದೊರೆವಡೆವೞಿಂಗಳೊಳಗಾ ।
ಪರೋಪಕಾರಕ್ಕೆ ಸದೃಶಮಾದುದನೊರ್ವಂ ॥
ಸುರರಾಜನ ಲೋಕದೊಳಂ ।
ಧರಣೀವಲಯದೊಳಮರಿದು ಪಡೆಯಲ್ಕೆಂಬರ್ ॥ 173 ॥

ಲೋಕಜ್ಞರಾಗಿ ಪರಹಿತ ।
ಮೇ ಕಾರ್ಯಮೆನುತ್ತೆ ತಿಳಿದು ಮಾಡುವ ಪುಣ್ಯ ॥
ಶ್ಲೋಕರೆ ಸಜೀವರುೞಿದ ವ ।
ರಾಕರ್ ಬುರ್ದುಕಿರ್ದೊಡೇನೊ ಸುಯ್ವ ಪೆಣಂಗಳ್ ॥ 174 ॥

ಊರೊಳಗಣ ತಿಳಿಗೊಳಮಿನಿ ।
ನೀರಿಂದಂ ತುಂಬಿ ತುಳ್ಕುವಂತೆವೊಲಕ್ಕುಂ ॥
ಸಾರಸಸಂಭವೆಯೊಲವಿನು ।
ದಾರಂ ಸಂಪದಕಗಾರವುಪ್ಪುದು ಧರೆಯೊಳ್ ॥ 175 ॥

ಕರುಣಾರಸಪೂರಿತಹೃ ।
ತ್ಸರಸಿಜರ ಪರೋಪಕಾರಶೀಲರ ಕೆಯ್ಯುಂ ॥
ಸಿರಿ ಸಾರೆಯೂರ ನಡುವಣ ।
ತರುಗಳ್ ತನಿವಣ್ಗಳಿಂದೆ ತಳ್ತವೊಲಕ್ಕುಂ ॥ 176 ॥

ಬಿತ್ತಿನ್ನಟಿ ಬೇರೆನ್ನದ |
ನಿತ್ತುಂ ಭಾಗಂಗಳಿಂದೆಯುಂ ಕುತ್ತಗಳಂ ||
ತುತ್ತುವ ಗಿಡುವವೊಲಕ್ಕುಂ |
ಪತ್ತುಗೊಳಲ್ ಸಿರಿ ಪರೋಪಕಾರಿಗಳೆಡೆಯೊಳ್ || 177 ||

ಸಂಗಳಿಸಿದ ಸಿರಿ ತಮ್ಮಿಂ |
ಪಿಂಗಿದೊಡಂ ಪರಹಿತಂಗಳಂ ಮಾಡುವುದಂ ||
ತಾಂ ಗೆಯ್ಯಲ್ವೇಡಿದ ಕ |
ಜ್ಜಂಗಳನಱಿವಮುಲಮತಿಗಳೇನುಟಿದಪರೇ || 178 ||

ಪರರೆಡರಂ ಹರಿಪುದಱೊಳ್ |
ನಿರಂತರಂ ನಿರತರಾದುದಾರರ್ಗ್ಗೆಡರಾ ||
ವರಿಸಲೊಡಂ ಗೆಯಲಾಱದೆ |
ಪರೋಪಕಾರಮನಟಿಲ್ದು ಬೇಗುದಿಗೊಳ್ವರ್ || 179 ||

ಪರಹಿತಮಂ ಗೆಯ್ವುದಱಿಂ |
ದೊರೆಕೊಳ್ವೊಡೆ ಕೇಡು ದಂದುಗಂಬಡದಾರ್ಯರ್ ||
ಪರಿವರ್ತಿಸಿಯುಂ ತಮ್ಮಯ |
ಶರೀರಮಂ ಪಡೆಯುತಕ್ಕುದಾ ಕೇಡೆಂಬರ್ || 180 ||

---

## 23. ದಾನ.

ಬೇಡುವ ಬಡವರ್ಗ್ಗೊಲವಿಂ |
ನೀಡಿಲ್ಲದೆ ಕುಡುವುದೊಂದೆ ಚಾಗಮೆನಿಕ್ಕುಂ ||
ನೋಡುವೊಡಿತರರ್ಗ್ಗೆಡರಿಪ |
ಕೋಡೆಲ್ಲಂ ಮಗುಟ್ದು ಪಡೆಯಲೀವ ಕಡಂ ದಲ್ || 181 ||

ಎರೆವುದು ಸುಗತಿಪ್ರದಮೆಂ ।
ದೊರೆವವರುಳ್ಳೊಡಮದಾಗಳುಂ ಪೊಲ್ಲದು ನಿ ॥
ಸ್ಸ್ವರೊಳೆಸಪ ಕೋಡು ಸದ್ಗತಿ ।
ನಿರೋಧಕರಮೆಂಬರುಳ್ಳೊಡಮದೊಳ್ಳಿತು ಕೇಳ್ ॥18 2॥

ಬಡವರೆವಾವೆಂದೆರೆವರ್ ।
ನುಡಿವಂದದೆ ತಾಮುಮನ್ಯರೆಡೆಯೊಳದೆಂದುಂ ॥
ನುಡಿಯುದುದಂತುಟು ತನ್ನೊಳ್ ।
ನುಡಿವಗ್ಗೀವುದು ಕುಲೀನರೊಳ್ ಸಹಜಗುಣಂ ॥ 183 ॥

ಬೇಡುವುದು ದುಃಖದಂ ಮೇಣ್ ।
ಬೇಡಲ್ಪಡುವುದುಮನಿತ್ತೆ ಕಾಣ್ಬನ್ನೆವರಂ ॥
ಬೇಡಿದುದಂ ಪಡೆದುದಱಿಂ ।
ನಾಡೆಯುಮಲರ್ದಿರ್ಪ ಯಾಚಕರ್ಕ್ಕಳ ಮೊಗಮುಂ॥ 184 ॥

ಪಸಿವಂ ಸೈರಿಸುವುದು ತಾ ।
ಪಸರೊಳ್ ಪೆಸರ್ವಡೆದ ಬಲ್ಮೆಯೆನಿಸುಗುಮದಱಿಂ ॥
ಪಸಿದರ ಪಸಿವಂ ಏತರಣ ।
ದೆಸಕದೆ ಪಱಿಯಿಪರ ಬಲ್ಮೆಯಗ್ಗಳಮೆನಿಕುಂ ॥ 185 ॥

ಬಡವರ್ಗ್ಗಡಸಿದ ಪಸಿವಂ ।
ತಡೆಯುದೆ ಕಿಡಿಸುಗೆ ಧನಾಢ್ಯರರ್ಥವ್ಯಯದಿಂ ॥
ದೆಡರೊಳ್ ನೆರವಪ್ಪಂತಿರೆ ।
ಕಡವರಮುಂ ಪದುಳಮಿರಿಸುವೆಡೆಯಿಾ ಧರ್ಮಂ ॥ 186 ॥

ಒಟ್ಟಜೆಯಿಂದಂ ಪಸಿದ ।
ರ್ಗೆಟ್ಟುದನುಣಲಿಕ್ಕಿ ಬಟಿಕಮುಣ್ಬನನೆಂದುಂ ॥
ಮುಟ್ಟಲ್ಕಣ್ಮದು ಮನುಜಂ ।
ಗೆಟ್ಟುೞಿಯಂ ಪಡೆದು ಕೊಲ್ವ ಪಸಿವೆಂಬ ಗದಂ ॥ 187 ॥
ಕಡವರಮಂ ಕುಡದಾರ್ಗಂ ।
ಮಡಲಿಱಿದೞಿಪಿಂದೆ ಮಡುಗುವಾ ಕಲ್ಲಿರ್ದಯರ್ ॥
ಬಡವರ್ಗೆ ಗತ್ತಾನಂದಮು ।
ನೊಡರಿಪುದಱಿನೊಗೆವ ಸೊಗಮುನಱಿಯುದರಕ್ಕುಂ ॥ 188 ॥
ಧನಸಂಖ್ಯೆ ಪೂರ್ಣಮಕ್ಕಂ ।
ದು ನಿರ್ಧನರ್ಗನ್ನದಾನಮೊಸಗದೆ ತಾನೊ ॥
ರ್ವನೆ ಕುಳ್ಳಿರ್ದುಣ್ಬುದು ಯಾ ।
ಚನೆಯಿಂದಂ ದಿಟದೆ ಹೀನಮೆಂಬರ್ ತಿಳಿದರ್ ॥ 189 ॥
ಸಾವಿನವೋಲ್ ದುಃಖಾವಹ ।
ಮಾವುದುಮಿಲ್ಲೀ ವಸುಂಧರಾವಳಯದೊಳಾ ॥
ಸಾವುಂ ಲೇಸೆನಿಕುಂ ದು ।
ರ್ದೈವದೆ ಬಂದೆರೆವರ್ಗೆಯಲಾಜಿದೊಡೊರ್ವಂ ॥ 190 ॥

---

## 24. ಕೀರ್ತಿ.

ದೀನರ್ಗೊಲವಿಂದೆಸವುದು ।
ದಾನಮುನಱಿದರ ಪೊಗೞ್ತೆಗೆಡೆಯಪ್ಪುದು ಮೇಣ್ ॥
ಮಾನವರ್ಗಿದಱಿಂದಂ ಪೆಱ ।
ತೇನಿರ್ಪುದೊ ಕಾಣೆನಿಹದೊಳೊಂದುವ ಲಾಭಂ ॥ 191 ॥

ಬಡವರ್ ಬೇಡುವ ಪುರುಳಂ ।
ಸಡಗರದಿಂದಿತ್ತು ಚಾಗಮಂ ಮೆಱೆವವರೊಳ್ ॥
ತೊಡರ್ದಿರ್ಪೊರ್ಕಳ್ಜಸಮನೆ ಕ ।
ನ್ನಡಿಕುಂ ಕಬ್ಬಂಗಳೆಲ್ಲಮುವನೀತಳದೊಳ್ ॥ 192 ॥

ಪರೆದು ದಿಗನ್ತಾಂಬರಮಂ ।
ಬರಮಂ ಪುದಿದೆಣೆಗೆ ಬರ್ಪುದೊಂದಿಲ್ಲೆನಿಪ ॥
ಬ್ತಿರದಿಂದಮೆಸೆವ ಜಸದಂ ।
ತಿರೆಪೋಲ್ ತಿರಮಾಗಿ ನಿಲ್ವುದಾವುದೊ ತಿರೆಯೊಳ್ ॥ 193 ॥

ತಿರೆಯೊಳಗಟಿಯದ ಜಸಮಂ ।
ತಿರಮಾಗಿರೆ ನಿಱಿಸಿ ನೆಗಟ್ವೆ ಮಹಿಮೋನ್ನತರಂ ॥
ಸುರಲೋಕಕೆಯ್ದಿದವರಿಂ ।
ಪಿರಿಯರೆನುತ್ತೆಯ್ದೆ ಕೊಂಡುಕೊನೆನರ್ ದಿವಿಜರ್ ॥ 194 ॥

ಜಸದ ತನುವೆಸಕಮಂ ಪೆ ।
ರ್ಚಿಸುವೀ ಭೌತಿಕಶರೀರದೆಡರುಂ ಮತ್ತಾ ॥
ಜಸದೊಡಲಂ ನೆಲೆಗೊಳಿಪೀ ।
ಕಸದೊಡಲಟಿವುಂ ಮಹಾಂತರಲ್ಲದಗುರ್ಂಟೇ॥ ॥ 195 ॥

ಪುಟ್ಟುವೊಡೆ ಮನುಜರಿಳೆಯೊಳ್ ।
ಪುಟ್ಟುಗೆ ವಿಖ್ಯಾತಿವಡೆವ ಗುಣದೊಡನದಱಿಂ ॥
ದಿಟ್ಟಳವಾಗದವರೇಕೆಯೊ ।
ಪುಟ್ಟಿದಪರ್ ಪುಟ್ಟದಿರ್ಪುದೊಳ್ಳಿತವಂದಿರ್ ॥ 196 ॥

ತೆಗಡೆ ಪೆಱರೇಕೆ ಮುಳಿವರೊ ।
ಪೊಗಪ್ತೆಗೆಡೆಯುಪ್ಪ ತೆಱದೆ ನೆಗೆಱದ ಮನುಜರ್ ॥
ತೆಗೆಬ್ಬಿಗೆಗ್ಗ ಮುಳಿದು ಫಳಮೇಂ ।
ತೆಗಡ್ಗೆ ತವರಾಗೆದಂತು ನೆಗೆಱಲ್ವೇಱ್ಕುಂ ॥ 197 ॥

ಮನುಜಂ ವಸುಧಾತಳದೊಳ್ ।
ಜನಿಸಿದುದಕ್ಕಾರ್ವುದಾನುವೊಂದಱೊಳಱಿದರ್ ॥
ಮನವೊಲ್ಪಿನೆಗಂ ಖ್ಯಾತಿಯು ।
ನನುಗೊಳಿಸಲ್ವೇಱ್ಕುಮಿಲ್ಲದೊಡೆ ಐತೆ ಜನನಂ ॥ 198 ॥

ಸುಲಲಿತಗುಣರ ಪೊಗಪ್ತೆಗೆ ।
ಪೊಲನಾಗದ ಮನುಜರೊಡಲ ಪೊಱೆಯುಂ ಪೊತ್ತಾ ॥
ನೆಲದೊಳ್ ಕಸವುಂ ಸೋದಿಸಿ ।
ಪಲಸೂಱ್ ಬಿತ್ತಿದೊಡಮಾಗೆದೊಳ್ವೆಳಸೆಂಬರ್ ॥ 199 ॥

ಎಂದುಂ ಪೊಂದದ ಕೀರ್ತಿಯ ।
ನೊಂದಿದನೇ ಬಾಱ್ದನೆಂದು ಪೇಱಲ್ಪಡೆಗುಂ ॥
ನಿಂದೆಗೆ ಪಕ್ಕಾದವನಂ ।
ಪೊಂದಿದನೆನಲಕ್ಕುಮಾತನೊಳ್ ಪುರುಳುಂಟೇ ॥ 200 ॥

---

## 25. ದಯೆ.

ಪಿರಿಯೊಳಗೆಲ್ಲಂ ಪೇರ್ಕೆ ।
ಸಿರಿಯೆನಿಕುಂ ಕರುಣೆಯೆಂಬ ಸಿರಿಯುಡಱೊಱೆಗಂ ॥
ದೊರೆಗಂ ಬಂದಪ್ಪುದೆ ಕ ।
ಷ್ಟರೊಳಂ ದೊರೆಕೊಳ್ವ ವಿತ್ತರೂಪದ ವಿಭವಂ ॥ 201 ॥

ಅನುರ್ದಿಗೆ ಮೆಱೆವುದು ದಯೆಯಂ |
ಪ್ರಮಾಣದಿಂ ಯುಕ್ತಿಯಿಂದವೊಳ್ಳಿತದೆಲ್ಲಾ ||
ಸಮಯಂಗಳನಾರಯ್ವೊಡ |
ಮಮಲಸುಖಕ್ಕದುವೆ ಸಾಧನಂ ಪೇಱತುಂಟೇ|| 202 ||

ಆರೆರ್ದೆಯಿಂ ಕರುಣಾರಸ |
ಪೂರಂ ಪೊಱಸೂಸಿ ಪರಿವುದವರ್ಗೇಱಪೊಱ್ತುಂ ||
ಘೋರತರವೇದನಾರವ |
ಪೂರಿತನರಕಪ್ರವೇಶಮಿಲ್ಲಂ ದಿಟದಿಂ || 203 ||

ಭೂತಂಗಳೊಳನುಕಂಪೆಯ |
ನೇತರ್ಕೆನ್ನದೆ ಸಮಂತು ಮೆಱೆಯುತ್ತುಮವಂ ||
ಪ್ರೀತಿಯಿನೋವುವರ್ಗೆಂದುಂ |
ಚೇತಕೆ ಭೀತಿಯನಮರ್ಚ ತವಿಪಘಮಿಲ್ಲಂ || 204 ||

ನೆಱೆಯೆ ದಯಾರಸದಿಂದಂ |
ತುಱುಗಿದ ಹೃತ್ಕಮಲಮುಳ್ಳರಂ ದುಃಖಂಗಳ್ ||
ಮಱುಗಿಸವಿದರ್ಕ್ಕೆ ಸಕ್ಕಿಗ |
ಳಱಿವೊಡೆ ತಿರೆಯುಲ್ಲಿ ಬಾ್ಟಿ ಮಾನಸರೆಲ್ಲಂ || 205 ||

ಮಱುಕಮನೆರ್ದೆಯಿಂ ತೊಲಗಿಸಿ |
ದುಱುದುಂಬಿತನಕ್ಕೆ ಪಕ್ಕುಗುಡುವದಯರ್ಕ್ಕಳ್ ||
ಮಱುಮೆಯ್ಯೊಳೊದವುವಱಲಂ |
ಮಱೆದಿರ್ಪರ್ ಮಱೆಯದಿರ್ದೊಡಿಂತೆಸಗುವರೇ || 206 ||

ಪುರುಳಿಲ್ಲದವಂಗೆಂತುಟು ।
ದೊರೆಕೊಳ್ಳವು ಮರ್ತ್ಯಲೋಕಸುಖಭೋಗಂಗಳ್ ||
ಕರುಣೆಯನುೞಿದಂಗಂತುಟು ।
ಪರಲೋಕಸುಖಾನುಭೂತಿ ದೊರೆಕೊಳ್ಳದು ಕೇಳ್ || 207 ||

ದುರ್ದೈವದೆ ದಾರಿದ್ರ್ಯಂ ।
ಪೊರ್ದಿದೊಡೆಂದಾನುಮೊಂದಲಕ್ಕುಂ ಸಿರಿಯುಂ ||
ನಿರ್ದಯತೆ ಪೊರ್ದೆ ಮನುಜಂ ।
ಬಟ್ಟಪನೆಂಬಾಸೆಯಿಲ್ಲಮುೞಿದವನೆ ವಲಂ || 208 ||

ಪರಿಕಿಸುವೊಡೆ ಭೂತದಯಾ ।
ವಿರಹಿತಹೃದಯರ್ಕ್ಕಳಜನನೆಸಪುದು ಬೆಳ್ಳ ||
ಕ್ಕರಿಗರ್ ವೇದೋದಿತತ ।
ತ್ತ್ವರಹಸ್ಯಮನೋದಿ ತಿಳವುದರ್ಕ್ಕೆಣೆಯಕ್ಕುಂ || 209 ||

ಅದಿರದಿದಿರಾಂತು ನಿಲಲಾ ।
ಱದರಂ ನಿಷ್ಕರುಣರಟಲಿಸಲ್ಕೆಯ್ದುವ ಕಾ ||
ಲದೆ ನೆನೆಗೆ ತಮ್ಮನತಿಬಲ ।
ರದಿರ್ಪಲೆಯ್ತರ್ಪ ವೇಳೆಯೊಳ್ ತಮ್ಮಿರವಂ || 210 ||

---

## 26. ಮಾಂಸವನ್ನು ತಿನ್ನದಿರುವುದು.

ತನ್ನ ಶರೀರದೊಳಡಗಂ ।
ಕೆನ್ನಂ ಪೆರ್ಚಿಸುವಪೇಕ್ಷೆಯಿಂ ಪ್ರಾಣಿಯುನೊಂ ||
ದಂ ನೇರ್ದಡಱಡಗಂ ತಿ ।
ನ್ಬಂ ನಿರ್ಘೃಣನಾತನೆಂತು ದಯೆಯಂ ಮೆಱೆವಂ || 211 ||

ಕಾಪಿಟ್ಟೋವದ ಮನುಜನ ।
ನೇಪರಿಯೊಳ್ ತೊಱೆದು ಪರಿಗುಮರ್ಥವ್ರಾತಂ ॥
ಆ ಪರಿಯೊಳಡಗನುಣ್ಬಾ ।
ಪಾಪಿಯ ಮನದಿಂದೆ ಪಾಱಿ ಪೋಕುಂ ಕರುಣಂ ॥ 212 ॥

ಕೊಲಲೆಂದು ಕೆಯ್ದುವಂ ಕರ ।
ತಲದೊಳ್ ಪಿಡಿದಿರ್ಪನೆರ್ದೆಯವೋಲ್ ಪ್ರಾಣಿಗಳಂ॥
ಸಲೆ ತಿಂದು ತೇಗುವವನೆರ್ದೆ ।
ಕೊಲೆಯಂ ಪಾರ್ದಿರ್ಕ್ಕುಮಲ್ಲದಱಿಗುಮೆ ದಯೆಯಂ ॥213॥

ಕರುಣೆಯದಾವುದಹಿಂಸಾ ।
ಚರಣಂ ನಿಷ್ಕರುಣೆಯಾವುದಾರಯೆ ಹಿಂಸಾ ॥
ಚರಣಂ ಹಿಂಸಾಜನ್ಯಂ ।
ತರಸಮುದಂ ತಿನ್ಬುದಾರ್ಗ್ಗಮಱಿನಲ್ತದಱಿಂ ॥ 214 ॥

ಅಡದಿನ್ನದಱಿನ ದೂಸಱು ।
ನೊಡಲೊಳ್ ನೆಲಸುವುವು ಜೀವಿಗಳ್ಗಸುಗಳವಂ ॥
ಕಿಡಿಸಿಯುಡದಿನ್ಬ ನರನಂ ।
ಪಡಿದೆಱೆದೇಂ ಪೊಱಗೆ ಪೋಗಲೀಗುಮೆ ನರಕಂ ॥ 215 ॥

ಬಿಕ್ಕನುಣಲೆಂದು ಮಾನಸ ।
ರಿಕ್ಕರ್ ಜೀವಿಗಳನದಱಿನಾತಂಗಳ್ಗಂ ॥
ತಕ್ಕುಮಘಮೆಂಬ ಮಾತೇಂ ।
ತಕ್ಕದೆ ಮಾಱುವರದಾರೊ ಕೊಳ್ಳದೊಡಡಗಂ ॥ 216 ॥

ಅಡಗೆಂಬುದು ಪರಿಕಿಸಿ ನೋ।
ಪ್ಪೊಡೆ ಪೆಱತೊಂದೊಡಲ ಪೂತಿಗಂಧಿವ್ರಣಮಾ ||
ಅಡಗಿನ ಮಲಿನತೆಯಂ ತಿಳಿ ।
ದಡದಿನ್ಬುದನುಱಿಯುವೇಟ್ಟುಪದಱಿವುಳ್ಳ ನರಂ || 217 ||
ಭ್ರಮೆಗೆಂದುಮೆಡೆಯನೀಯದ ।
ವಿಮಲಪ್ರಜ್ಞಾವಿಶೇಷಕಾಡುಂಬೊಲನಾ ||
ದಮಲಗುಣರುಣ್ಬರೇ ಕರು ।
ಣಮನುಱಿದಱಿದೊಂದು ಜೀವದೊಡಲೆಡೆಯಡಗಂ || 218 ||
ಉರಿಯೊಳಗಾಜ್ಯಾಹುತಿಯಂ ।
ಸುರಿದು ಸುರರ್ ತಣಿಯೆ ಸಾಸಿರಂ ಸವಮುಂ ಬಿ ||
ತ್ತರಿಪುದಱಿನೊಂದುಜೀವಮ ।
ನರಿದದಱೊಡಲಡಗನುಣ್ಣದುದೆ ವರಮೆನಿಕುಂ || 219 ||
ಅಱಿಯದೆ ಜೀವಮನೊಂದುಮ ।
ನುಱಿದಡಗಂ ತಿನ್ಬ ಪಾಪಮುಂ ನೆಗೞ್ವವನಂ ||
ಬಱಿಸಾರ್ದು ಕುಂಬಿಡುಗುಮಸ ।
ಕಱಿದನುರಾಗದೆ ಸಮಸ್ತಜೀವನಿಕಾಯಂ || 220 ||

---

## 28. ಕಪಟವಾದ ನಡತೆ.

ಮನದೆಡೆಯೊಳ್ ನೆಲಸಿದ ವಂ ।
ಚನೆಯಂ ಮಱಸಲ್ಕೆ ಪೊಱಗೆ ನೇರಿದನಾಗ ||
ಲ್ಕನುಗೊಳಿಸಿದ ವೇಷಂಗಂ ||
ಡು ನಕ್ಕಪುವು ಪಂಚಭೂತಮೊಡಲೊಳ್ ನರನಾ || 221 ||

ಅಱಿದುಂ ಪಾಪಾಚರಣದೊ |
ೞೆಱಗಲ್ ಮಾನಸಕೆ ತೆಱಪುಗುಡುವೊಡೆ ಮನುಜರ್ ||
ಅಱಿಯದರಂ ಬೆಱಗಾಗಿಪ |
ಪೊಱಗಣ ಮುನಿವರ್ಯವೇಷಮೇಗೆಯ್ದಪುದೋ || 222 ||

ಚಿತ್ತಮನಾಳಲ್ ನೆಱೆಯದೆ|
ಕಿತ್ತಡಿವರಿಜಾಂತು ಮನಕೆ ಬೆಸಕೆಯ್ವ ನರಂ ||
ಪತ್ತಿಸಿ ಪುಲಿದೊವಲಂ ಮೆ |
ಯ್ಗತ್ತಂ ಕೆಯ್ಗಳೊಳೆ ಮೇವ ವೃಷಮಂ ಪೋಲ್ವಂ|| 223 ||

ಪದೆದು ಖಲಂ ತವಸಿಯ ಜೋ |
ಹದ ಮಱೆಯೊಳ್ ನಿಂದು ದುರಿತಕೃತ್ಯಮನೊಡರಿ ||
ಪ್ಪುದು ಪೊದಱಲ್ಲಿ ಕಿರಾತಂ |
ಪುದುಗಿರ್ದು ಖಗಾಳಿವಿಡಿವುದಕ್ಕೆಣೆಯಕ್ಕುಂ || 224 ||

ಪೆಱರೊಲ್ಮೆವಡೆಯಲವರೊಳ್ |
ಪಱಿದೆಂ ಸಂಸೃತಿಯ ಪತ್ತನೆಂಬರ ಕಪಟಂ ||
ಮಱುಗುತ್ತೇಗೆಯ್ದಪೆನು |
ತ್ತೊಱಲ್ವಿನಂ ಬಟಿಕೆ ದುಃಖಮಂ ಬಳೆಯಿಸುಗುಂ || 225 ||

ತೊಱೆಯದೆ ವಿಷಯಸ್ಪೃಹೆಯಂ |
ತೊಱೆದರವೋಲ್ ತೋಱಿ ವೇಷಭಾಷೆಗಳಿಂದಂ||
ಪೆಱರಂ ವಂಚಿಸಿ ಮೇ ಬಾ |
ಬ್ವಱಗುಲಿವೋಲ್ ಕಠಿನಹೃದಯ ರಾರೊಳರಿಳೆಯೊಳ್|| 226 ||

ಗುಂಜಿಯುವೋಲ್ ಪೊಱಗೆ ಕರಂ |
ರಂಜಕರಾಗಿರ್ದು ಮಂಜುವೇಷದಿನೊಳಗಾ ||
ಗುಂಜಿಯ ಮೂಗಿನ ತೆಱದಿಂ |
ದಂಜನವರ್ಣಕ್ಕಳಾದರುಂ ಧರೆಯೊಳೊಳರ್ || 227 ||

ಚಿತ್ತದೆ ಕಱೆ ನೆಲಸಿರೆಯುಂ|
ಕಿತ್ತಡಿಗಳ ತೆಱದೆ ತೊಱೆಗಳೊಳ್ ಪಲಸೂಳ್ ವಿಾ ||
ಯುತ್ತಿಂತಟು ಬೈಡಾಲಕ |
ವೃತ್ತಿಯನಾಂತಿರ್ಪ ಧೂರ್ತರೆನಿಬರೊ ಧರೆಯೊಳ್ || 228 ||

ನೇರಿತು ಬಾಣಂ ಕ್ರಿಯೆಯೊಳ್ |
ಕ್ರೂರಂ ವಕ್ರಂ ವಿಪಂಚಿ ಸುಖಕರಮದಱಿಂ ||
ನೇರಿದರಲ್ಲದರೆಂಬುದ |
ನಾರಯ್ವುದು ಚರ್ಯೆಯಿಂದಮೇವುದೊ ವೇಷಂ || 229 ||

ಪಿರಿಯರ ಪಟಿವೆಸಕಗಳಂ |
ವಿರಚಿಸದೊಡೆ ತಾಪಸಕ್ಕಳದುವೇ ಸಾಲ್ಗುಂ ||
ಶಿರದೊಳ್ ಜಡೆವಳೆಯಿಪ್ಪುದಂ |
ಶಿರಮಂ ಬೋಟಿಪುದನುಟಿದೊಡಂ ಕ್ಷತಿಯಿಲ್ಲಂ || 230 ||

---

## 29. ಕಳದೆ ಇರುವುದು.

ಇಳೆಯೊಳ್ ಮನುಜಂ ಸದ್ಗತಿ |
ಗೆಳಸುವೊಡೆನ್ನದುಮನನ್ಯರೊಡಮೆಯನೊಂದಂ ||
ಕಳಲೆಳಸದ ಮಾಣ್ಕೆಯಿನಾ |
ಗಳುಮರ್ದೆಯಂ ಕಾವುದಪ್ರಮತ್ತತೆಯಿಂದಂ || 231 ||

ಮನದೊಳ್ ಕಾಟ್ಗೆಯ್ತ್ತಗಳಂ ।
ನೆನೆವೊಡಮಘಮೆ ವಲಮೆಂಬರಱಿದವರದಱಿಂ ॥
ಮನದೆಡೆಯೊಳೆಂದುಮನ್ಯರ ।
ಧನಾದಿಯಂ ಕಳ್ವ ಚಿಂತೆಗೆಡೆಗುಡವೇಡಂ ॥ 232 ॥

ಪರರಂ ವಂಚಿಸಿ ಕಳ್ದಪ ।
ಹರಿಸಿದ ಕಸವರಮಗುಂತಿವಡೆದಗ್ಗಲಿಪಂ ॥
ತಿರೆ ತೋಱಿ ಬೇಗದಿಂ ಮೆ ।
ಯ್ಗರೆಗುಂ ಮೆಯ್ಗರೆಯೆ ಕೂಡೆ ಮುನ್ನಿರ್ದಱಿನುಂ ॥ 233 ॥

ಸ್ತ್ತೇಯದೊಳಳಿಪು ನರಂಗಾ ।
ಪ್ಯಾಯನವೆಂಬಿನೆಗಮಾದಿಯೊಳ್ ತೋಱಿದೊಡಂ ॥
ಆಯತಿಯೊಳಟಿಯದಟಲಂ ।
ಬೀಯದ ಬೇವಸಮನುಂಟುಮಾಡಿಯೆ ಮಾಣ್ಗುಂ ॥234 ॥

ಪರರಂ ಬಂಚಿಸಿ ಪುರುಳಂ ।
ಪರಿಹರಿಸಲ್ಕವರ ಮಱವೆಯಂ ಪಾರ್ದಿರ್ಪರ್ ॥
ಕರುಣೆಯುಮಂ ಕೂರ್ಮೆಯುಮಂ ।
ಪರರೊಳ್ ಮೆಱೆಯಲ್ಕದೆಂತು ನೆಱೆವರ್ ಧರೆಯೊಳ್॥ 235 ॥

ಕಳವಿನೊಳತ್ಯುತ್ಕಟಮಾ ।
ದಳಿಪಂ ತಳೆದಿರ್ಪ ನೀಚಮನುಜರ್ ಜೀವಂ ॥
ಗಳ ಪರಿಣತಿಯಂ ಗತಿಯಂ ॥
ತಿಳಿದು ಸುಮಾರ್ಗದೊಳೆ ನಡೆಯಲೇನಾರ್ತಪರೇ ॥ 236 ॥

ಜೀವಂಗಳ್ಗಂಟಾಗುವ |
ಭಾವಿಸ್ಥಿತಿಯಂ ಸಮಂತು ತಿಳಿದಮಳಿನರೊಳ್ ||
ಕೇವಲತಮೋತಿರೇಕದಿ |
ನಾವಿರ್ಭವಮಪ್ಪ ಚೌರ್ಯಮೆಡೆವಡೆದಪುದೇ || 237 ||

ತೊಳಗುವ ತತ್ತ್ವಜ್ಞಾನದ |
ಬೆಳಗಿಂ ಪಜ್ಜಳಿಪ ಮನದೆ ನೆಲಸುವವೊಲಱಿಂ ||
ಕಳವಿನೊಳೆಱಗಿದ ಮಾನಸ |
ದೊಳಾವಗಂ ನೆಲಸಿದಪ್ಪುದತಿಸಂಧಾನಂ || 238 ||

ತಮಗೆ ಕಳವೊಂದೆ ಪುರುಷಾ |
ರ್ಥಮೆಂದು ಭಾವಿಸುತೆ ಹೃದಯದೊಳ್ ಪರರ ಪದಾ ||
ರ್ಥಮನೀಟ್ಟುಕೊಳ್ವ ತೆಱನಂ |
ಸಮಕಟ್ಟುವ ನೀಚರಚಿರಕಾಲದೊಳಟಿವರ್ || 239 ||

ಕಳವಿಂಗೆಱಗಿದ ಮನುಜರ |
ಕಳೇಬರಂಗಳುಮವರ್ಗೆ ಬಸಮಲ್ಲೆಂತುಂ ||
ಕಳವಿಂಗೆಱಗದ ನರರ್ಗಾ |
ನಿಳಿಂಪನಿಳಯಮುಮಧೀನಮಲ್ಲದುದಲ್ಲಂ || 240 ||

---

### 30. ನಿಜಹೇಳುವುದು.

ಪರಿಕಿಪೊಡೆ ಸತ್ಯಮೆಂಬುದು |
ಪರರ್ಗೆ ಪುಚ್ಚಟಿಯನಾವ ತೆಱದೊಳಮಿನಿಸುಂ ||
ದೊರೆಕೊಳಿಸದ ವಚನಂಗಳ |
ನೊರೆವುದೆ ಪೆಱತೊಂದುಮಲ್ಲಮೆಂಬರ್ ತಿಳಿದರ್ || 241 ||

ಪುಸಿಯಿಂದೆತ್ತಾನುಂ ಸನು ।
ನಿಸುವೊಡೆ ನಿರ್ದೋಷಮಾದ ಹಿತಮನ್ಯಗ್ರ್ಗ ॥
ಪುಸಿನುಡಿಯುಂ ಪರ್ಯಾಲೋ ।
ಚಿಸಿ ನೋಽಪ್ಪೊಡೆ ದಿಟದ ತೆಱನನೊಳಕೊಂಡಿಕ್ಕುಗಂ॥ 242 ॥

ಹೃದಯಮುಱಿತಿರ್ಪುದಂ ಪುಸಿ ।
ಯುದಿರ್ಕೆ ನರನಂತು ಪುಸಿದನಾದೊಡೆ ಬೞಿಕಂ ॥
ಹೃದಯಮುದು ಸಕ್ಕಿಯಾಗು ।
ತ್ತೊದವಿಸಿ ಬೇವಸಮನಿರದೆ ಬೇಯಿಕುಮುವನಂ ॥ 243 ॥

ನುಡಿಯದೆ ಪುಸಿವಾತುಗಳಂ ।
ನುಡಿಗಂ ಮಾನಸಕಮೆಂದುಮವಿಸಂವಾದಂ ॥
ಗೆಡೆಗೊಳ್ವಂತುಟು ನೆಗಟ್ವರ್ ।
ಪಡೆವರ್ ಸಜ್ಜನರ ಮಾನಸಂಗಳೊಳೆಡೆಯಂ ॥ 244 ॥

ಹೃದಯಕೆ ಪೊರ್ದುಗೆಯುಪ್ಪನ ।
ಮುದಂಭದಿಂ ದಿಟಮನೊರೆವ ನನ್ನಿವೆಡಂಗರ್ ॥
ಪದೆದು ತಪೋದಾನಂಗಳ ।
ನೊದವಿಸಿ ಪೆಸರ್ವಡೆದರಿಂದಮಗ್ಗಳಮೆನಿಪರ್ ॥ 245 ॥

ಪುಸಿಯದುದಱಿಂತೆವೋಲ್ ಮಾ ।
ನಸರ್ಗಿಹದೊಳ್ ಜಸಕೆ ಕಾರಣಂ ಪೆಱತಿಲ್ಲೊಂ ॥
ದಿಸುಗುಮುವಗ್ಗ್ರದುವೆ ಪರ ।
ಕ್ಕೆ ಸಾರಸಾಧನಮೆನಿಪ್ಪ ಧರ್ಮಂಗಳುಮಂ ॥ 246 ॥

ಎಡೆವಿಡದೊರ್ವಂ ಸಟೆಯಂ |
ನುಡಿಯಿಂ ಕೊಲಗಿಸಿ ಯಥಾರ್ಥಮಂ ಪೇೞಲ್ಕಾಂ ||
ತೊರ್ಡವಂ ಮತ್ತಿನಱಿಂಗಳ |
ನೊಡರಿಸದೊಡಮಾವ ತೆಱದ ಹಾನಿಯುಮಿಲ್ಲಂ || 247 ||

ಒದವುಗುಮೆಂತುಟು ಮಾನಸ |
ನ ದೇಹದೊಳ್ ನಿರ್ಮಲತ್ವಮಂಬುವಿನಿಂದಂ ||
ಒದವಿದಪುದಂತುಟಾತನ |
ಹೃದಯದೊಳಮಲತೆ ಯಥಾರ್ಥವಾದಿತೆಯಿಂದಂ || 248 ||

ಜಗದಿರುಳಂ ತವಿಸುವ ದೀ |
ವಿಗೆಗಳ್ ಪಲವುಂಟವಕ್ಕೆ ದೀವಿಗೆವೆಸರೇಂ ||
ತಗುಗುಮೆ ಬಗೆಯಿರುಳಂ ತೊ |
ಟ್ಟಗೆ ತವಿಸುವ ಸತ್ಯಮೆಂಬ ದೀಪಮೆ ದೀಪಂ ||249 ||

ಜಗದೊಳ್ ಪ್ರಮಾಣಮೆನಿಸುವ |
ನಿಗಮಾಗಮಧರ್ಮಶಾಸ್ತ್ರನಯಶಾಸ್ತ್ರಂಗಳ್ ||
ನಿಗದಿಸುಗುಂ ನಿಕ್ಕುವಮಂ |
ಮಿಗುವಱಿನಿನ್ನಿಲ್ಲಮೆನುತುಮೊಕ್ಕೊರಲಿಂದಂ || 250 ||

---

31. ಕೋಪವಿಲ್ಲದಿರುವುದು.

ಕೇಡಂ ಪುಟ್ಟಿಸುವೆಡೆಯೊಳ್ |
ಮೂಡಲ್ಕೆಡೆಗುಡದೆ ಮುಳಿಸನುಡಿವನೆ ತಿಳಿದಂ ||
ಕೇಡಂ ಪುಟ್ಟಸದೆಡೆಯೊಳ್ |
ನಾಡೆಯುಮಾ ಮುಳಿಸನುಡಿದೊಡೇನುಡಿಯದೊಡೇಂ||251||

ಬಲ್ಲಿದರೊಳ್ ಕತಿಯಾರ್ಗಂ ।
ತಲ್ಲಣಮೊದವಿಸುಗುಮೆಂಬುದನುಭವಸಿದ್ಧಂ ॥
ಮೆಲ್ಲಿದರೊಳ್ ಕತಿ ಪಾಸಟ ।
ಯಿಲ್ಲದ ತಲ್ಲಣಮನೊದವಿಕುಂ ತಿಳಿವುದಿದಂ ॥ 252 ॥

ಅಳವಂ ಮೀಱಿದನರ್ಥಂ ।
ಗಳನೊದವಿಸಿ ದುಃಖಜಾಲದೊಳ್ ತೊಡರಿಸಿ ಮೇಣ್ ॥
ಬಳೆಯಿಸಿ ಪಗೆಯುಂ ಕಿಡಿಸುವ ।
ಮುಳಿಸಂ ಮನದಿಂದೆ ಕಳೆಯವೇಳ್ಪುದು ತಿಳಿದಂ ॥ 253 ॥

ಮೊಗದೊಳ್ ಮಿಱುಗುವ ನಗೆಯುಂ ।
ಬಗೆಯೊಳ್ ನೆಲೆಗೊಂಡ ಹರಿಸಮುಂ ತೊಲಗಿಸುಗುಂ ॥
ಬಗೆವೊಡೆ ಮನುಜಂಗೆ ಕನ ।
ಲ್ಕೆಗೆ ಪಾಸಟಿಯುಪ್ಪ ಪಗೆಯದಾವುದೊ ಜಗದೊಳ್ ॥ 254 ॥

ಮನುಜಂ ತನ್ನಂ ಕಾವೊಡೆ ।
ಮನಮುಂ ಕಾವುದು ಕನಲ್ಕೆ ನೊಳೆಯದ ತೆಱದಿಂ ॥
ಮನಮುಂ ಕಾಯದೊಡೊಗೆದಾ ।
ಕನಲ್ಕೆಯಾತಂಗನರ್ಥಮುಂ ಪುಟ್ಟಿಸುಗುಂ ॥ 255 ॥

ತನಗಿರ್ಕೆದಾಣಮಾದವ ।
ರನಲ್ಲದವರಾಪ್ತಮಿತ್ರರಂ ತಚ್ಚಿಂತಾ ॥
ವನಧಿಪ್ಲವರಂ ಸುಡುಗುಂ ।
ಕನಲ್ಕೆಯೆಂಬಾಶ್ರಯಾಶನೇಂ ನಿರ್ಘೃಣನೋ ॥ 256 ॥

ನೆಲನಂ ಕೆಯ್ಯಿಂದಂ ವೋ ।
ದಲೊಡಂ ಕೆಯ್ಯೆಂತು ತಪ್ಪದೇರ್ಪೆತ್ತಪುದಂ ॥
ತು ಲಯುಂಬಡೆವಂ ತಪ್ಪದೆ ।
ಬಲಸೂಚಕಗುಣಮಿದೆಂದು ಕತಿಯುಂ ತಳೆದಂ ॥ 257 ॥

ಮಿಳ್ಳಿಸುವ ಶಿಖಿಗಳಿಂದಂ ।
ದಳ್ಳಿಪ ಪೆರ್ಗಿಚ್ಚು ಮೆಯ್ಯನಳುರ್ದಂತೆರ್ದೆಯುಂ ॥
ಅಳ್ಳಿಱಿದೊರ್ವನಟಳ್ಚೆಯು ।
ಮೊಳ್ಳಿತ್ತಾತಂಗೆ ಮುಳಿಯದಿರಲಾಪೊರ್ಡೆ ಕೇಳ್ ॥ 258 ॥

ಬಗೆಯೊಳ್ ಕಿನಿಸೆಂಬುದನಾ ।
ವಗೆಮುಱಿಯದ ನಿಷ್ಕಳಂಕಚರಿತರ ಬಗೆಯ ॥
ಲ್ಲೊಗೆದ ಮನೋರಥವಲ್ಲರಿ ।
ಯೊಗುಮಿಗೆಯಿಂ ಪೂತು ಕಾತು ಪಣ್ತೊಱಗದೆ ಪೇಳ್ ॥259॥

ಕಡುಮುಳಿಸಿಂಗಾಸ್ಪದಮುಂ ।
ಕುಡುವರ್ ಮೃತರನ್ನರೊಡಲೊಳಸುವಿರ್ದೊಡಮೇಂ ॥
ಗಡ ಮುಳಿಸಂ ತೊಱೆದರ್ ಮೃತಿ ।
ಗಡೆಯಪ್ಪೊಡಮಮರರನ್ನರಾರಯ್ಯಲೊಡಂ ॥ 260 ॥

---

## 32. ಹಿಂಸೆಮಾಡದಿರುವುದು.

ಪರಪೀಡನದಿಂದಂ ತಮ ।
ಗೆರಿದೆನಿಪಣಿಮಾದಿಸಿದ್ಧಿ ಸಮ್ಮನಿಸುವೊಡಂ ॥
ವಿರಚಿಸಲಾಗದನೆಂಬುದು ।
ನಿರವದ್ಯಗುಣರ್ಕಳೆರ್ದೆಯ ತಱಿಸಲವಕ್ಕುಂ ॥ 261 ॥

ವಿದ್ವೇಷದಿನೊರ್ವಂ ತವು ।
ಗುದ್ವೇಗಂ ಮನದೊಳೊಗೆಯೆ ಕೇಡೆಸಗಿದೊಡಂ ||
ಸದ್ವೃತ್ತರ್ ಮುಯ್ಗವನೊಳ್ ।
ವಿದ್ವೇಷಮನಾಂತು ಪೊಲ್ಲಕೆಯ್ಯರದೆಂದುಂ || 262 ||

ಲೋಗರ್ ಪೊಲ್ಲಮೆಗೆಯ್ದೊಡ ।
ಮಾಗಸ್ಕರನಲ್ಲದಿರ್ಪ ತನ್ನೊಳ್ ಕೇಡಂ ||
ಯೋಗಿಯುವಗ್ಗ್ರಡರಿಸಿದೊಡೆ ।
ನೀಗಲ್ಕರಿದಪ್ಪ ದುಃಖಕಿರಲೆಡೆಯುಪ್ಪಂ || 263 ||

ಮುಸಗುತೆ ನಿನ್ನೊಳ್ ಪೊಲ್ಲದ ।
ನೆಸಗಿದವರ್ ನಾಣ್ಚಿ ತಲೆಯನೆಱಗಿಸುವನ್ನಂ ||
ಒಸೆದನುನಯವಚನಂಗಳ ।
ನುಸಿರಿದವಗ್ಗ್ರಚಿತಶಿಕ್ಷೆಯಕ್ಕುಂ ದಿಟದಿಂ || 264 ||

ಪರರಟಲಂ ತನ್ನಟಲಂ ।
ತಿರೆ ಭಾವಿಸುತವರ್ಗೆ ದುಃಖಮಾವಂದದೊಳಂ ||
ದೊರೆಕೊಳ್ಳದಂತು ವರ್ತಿಸ ।
ದಿರೆ ನರನೇವಾಪ್ತಿಯವನ ವಿದ್ಯಾವಿಭವಂ || 265 ||

ಮನುಜಗ್ಗ್ರವು ದುಃಖಂಗಳ ।
ನನುಗೊಳಿಸುವುವೆಂದು ತನ್ನಯಂತಃಕರಣ ||
ಕ್ಕನುಮಿತಿಯಿಂದಂ ತಿಳಿದುವ ।
ನಿನಿಸುಂ ಪೆಱರೊಳ್ ನೆಗೆಚ್ಚಲಾಗದು ತಿಳಿದಂ || 266 ||

ಹೃದಯಮಱಿವಂತು ದುಃಖಮ |
ನೊದವಿಸುವೆಸಕಮನದೆಂದುಮಾರೊಳಮಾವಂ ||
ದದೊಳಮಿನಿಸಾನುಮೊಡರಿಸ |
ದುದೆ ಧರ್ಮಂಗಳೊಳುದಾತ್ತಧರ್ಮಮೆನಿಕ್ಕುಂ || 267 ||
ಪರರೆಸಗಿದಟಲಿನೆರ್ದೆಯೊಳ್ |
ಪರಿತಾಪಂ ತನಗೆ ಪುಟ್ಟುವುದನಱಿದಿರ್ದುಂ ||
ನರನನ್ಯರ ಮನಕೇಕೆಯೊ |
ಪರಿತಾಪಮನುಂಟುಮಾಡುವೆಸಕಮನೆಸಪಂ || 268 ||
ಮುಂಬಗಲೊಳ್ ಪೆಱರ್ಗೊರ್ವಂ |
ಮುಂಬರಿದದವಟಲನುಂಟುಮಾಡಿದೊಡದು ತಾಂ||
ಪಿಂಬಗಲೊಳಾತನೆಡೆಗೊ |
ತ್ತುಂಬದಿನೆಯ್ದುತ್ತೆ ಪುಟ್ಟಕುಂ ಮನಕತಮಂ || 269 ||
ದುಃಖಂಗಳನ್ಯಜೀವಿಗೆ |
ದುಃಖಮನೊದವಿಸುವ ನರರನಂಡಲೆವುದಱಿಂ ||
ದುಃಖಂಗಳ್ಗಿಳಸದವರ್ |
ದುಃಖಮನೇನನ್ಯಜೀವಿಗೊದವಿಸಿದಪರೇ || 270 ||

---

## 33. ಕೊಲ್ಲದಿರುವುದು.

ಇಳೆಯೊಳ್ ಸಮಸ್ತಧರ್ಮಂ |
ಗಳ ತಿರುಳಾವುದೆನೆ ಕೊಲ್ಲದುದು ಕೊಲೆಯೆಂಬ ||
ಗ್ಗಳದಘಮಿತರಾಘಂಗಳ |
ನಳುಂಬಮಪ್ಪಿನೆಗೆಮಾರೊಳಂ ಬಳೆಯಿಸುಗುಂ || 271 ||

ಮುದದಿಂದುಣಿಸಂ ಪಸಿದೆ ।
ಯ್ದುದವಗ್ಗ್ರ್ಗಂ ಪಚ್ಚು ಕೊಟ್ಟ ಬಟಿಕಂ ತಾನು ॥
ಣ್ಬುದುಮಖಿಲಜೀವರಾಶಿಯ ।
ನೊಡವಿದ ದಯೆಯಿಂದೆ ಕಾವುದುಂ ಸದ್ಧರ್ಮಂ ॥ 272 ॥

ಎಲ್ಲಾ ಧರ್ಮಂಗಳೊಳಂ ।
ಕೊಲ್ಲದುದೆಂಬಮಲಧರ್ಮಕೆಣೆವರ್ಪುದು ಬೇ ॥
ಱಲ್ಲಮುದಕ್ಕೆರಡನೆಯದು ।
ಸೊಲ್ಲಿಸದುದು ಪುಸಿಯನೆಂಬರಮಳಪ್ರಜ್ಞರ್ ॥ 273 ॥

ಜೀವಮನಾವುದನಟಿಯದ ।
ಪಾವನತಮಮೆನಿಸುವಜಿನನೇಕಾಗ್ರತೆಯಿಂ ॥
ಕಾವುದು ಮನುಜಂ ಸದ್ಗತಿ ।
ಗೇವಮಿನಿತ್ತಿಲ್ಲದೆಯ್ದಲುತ್ತಮಮಾರ್ಗಂ ॥ 274 ॥

ಜನಿಗಳ್ಕುತೆ ಸಂಸೃತಿಬಂ ।
ಧನಮಂ ಪಱಿದಿಕ್ಕಿ ತೊಱೆದನಿಂದಂ ಪಿರಿಯಂ ॥
ಹನನಮೆನಿಪ್ಪಘಕಳ್ಕು ।
ತ್ತನವರತಮಹಿಂಸೆಯೆಂಬ ಧರ್ಮಕೆ ಕೂರ್ಪಂ ॥ 275 ॥

ಜೀವದಯಾಪರನಾಗುತೆ ।
ಜೀವಮನಾವುದುಮನಟಿಯದಮಲವ್ರತಮಂ ॥
ಕಾವ ಮಹಾತ್ಮನನೆಲ್ಲಾ ।
ಜೀವಮುಮಂ ಕೊಲ್ವ ಜವನುಮಳಱಿಸಲಾಱಂ ॥ 276 ॥

ಪೆಱತೊಂದು ಜೀವಮಂ ತ ।
ಳ್ತಿಱಿವುದನುಱಿದಂದು ತನ್ನ ಜೀವಿತಮೊಡಲಂ ॥
ತೊಱೆದೆಯ್ದುವೊಡಂ ಮನುಜಂ ।
ತಱಿವದಱೊಡಲಿಂದೆ ತೊಲಗಿಸಲ್ಕಾಗಸುವಂ ॥ 277 ॥

ಯಾಗಂಗಳೊಳಿಕ್ಕಿದ ಪಶು ।
ಮೇಗೆನಿಸುವ ಸುಖಮನೀಗುಮೆಂಬೊಡಮುರೆಬರ್ ॥
ಯೋಗಿಗಳಿತರಪ್ರಾಣಿವ ।
ಧಾಗತಸುಖಮತಿಜಘನ್ಯಮೆಂದೆಣಿಸಿರ್ಪರ್ ॥ 278 ॥

ಕೊಲೆಯೆಂಬ ಪಾಪಕೃತ್ಯಮ ।
ನೊಲವಿಂದೊಡರಿಸುವ ನೀಚರಿನಿಸುಂ ತಿಳಿಯರ್ ॥
ಕೊಲೆಯ ಮಳಿನತೆಯನದನಱಿ ।
ದಲಘುಗುಣರ್ ಪೊಲೆಯರಿಂದೆ ಭಾವಿಪರವರಂ ॥ 279 ॥

ಬಡತನಕಂ ಕುತ್ತಕಮಿರ ।
ಲೆಡೆಯಾಗಿ ದುರಂತದುಃಖದೊಳ್ ನರಲ್ವವರಂ ॥
ಮಡಿಪಿದರಿವರಾ ಭವದೊಳ್ ।
ತಡೆಯದೆ ಜೀವಿಗಳನೆಂದು ನುಡಿವರ್ ತಿಳಿದರ್ ॥ 280 ॥

---

## 40. ವಿದ್ಯೆ.

ಕಲ್ವುದು ಸಲೆ ಕಲವೇಡಿದ ।
ನಲ್ವಿಜ್ಜೆಯನೊರ್ವನಂತು ಕಲ್ತು ಬಟಿಕ್ಕಂ ॥
ನಿಲ್ವುದು ತಾಂ ಕಲ್ತಿರ್ಪಾ ।
ನಲ್ವಿಜ್ಜೆಗೆ ತಗುವ ಮಾಳ್ಕೆಯಿಂ ಸತ್ಪಥದೊಳ್ ॥ 281 ॥

ಇತರಕಲಾವಗೆಮಕೆ ಸಾ |
ಹಿತಿಯುಂ ಗಣಿತಮುಮಮೋಘಸಾಧನಮಕ್ಕುಂ ||
ಮತಿವಂತರ್ ಮನುಜಗ್ಗಿರ್ೀ |
ದ್ವಿತಯಂ ಕಣ್ಗಳ್ ದಲೆಂಬರದುಕಾರಣದಿಂ || 282 ||

ಕಲ್ತುಱಿದರೆ ಕಣ್ಣುಳ್ಳರ್ |
ಕಲ್ತುಱಿಯದ ಗಾವಿಲರ್ಕ್ಕಳಾನನದೆಡೆಯೊಳ್ ||
ನಿಲ್ತುವು ಪುಣ್ಗಳೆ ದಲ್ ಕ |
ಣ್ಣಲ್ತುವು ಪರಿಕಿಸುವೊಡೆಂದು ಪೇಱ್ದಿರ್ ತಿಳಿದರ್ || 283 ||

ತಮ್ಮೊಡಪೆರೆಹುಂದು ಜನಂ |
ಸಮ್ಮದಮಾಂಪಂತಗೆಲ್ದೊಡಿನ್ನೆಂದಿವರೊಳ್ ||
ಸಮ್ಮೇಳನಮೊದವುಗುಮೆಂ |
ದುಮ್ಮಳಿಪಂತಿರ್ಕುಮೆಯ್ದೆ ಕಲ್ತವರ ಗುಣಂ || 284 ||

ಸಿರಿವಂತರಿದಿರೊಳಧನರ್ |
ಸಿರಮೆಱಗಿಸಿ ನಿಂದು ಬೇಱ್ಪ ತೆಱದಿಂ ವಿದ್ವ ||
ದ್ಗುರುವೊಳ್ ವಿದ್ಯಾಭಿಕ್ಷೆಯ |
ನೆರೆದರ್ ಪೆಸರ್ವಡೆವರನ್ಯರವಮತಿವಡೆವರ್ ||285 ||

ಬಗೆರಗೆಯೊಳ್ ಮಣಲನೆನಿ |
ತ್ತಗಱ್ದರ್ ಮಾನಸರನಿತ್ತು ನೀರೊಸರ್ಗುಂ ಬಿ ||
ತ್ತಗರೊಳ್ ಬಿಜ್ಜೆಯನೆನಿತೆರ್ದೆ |
ವುಗೆ ಕಲ್ವರನಿತ್ತು ತಿಳಿವು ಪೊಣ್ಮುಗುಮವರೊಳ್ ||286||

ಆವೂರ್ನಾಟ್ಕಳೊಳಂ ವಿ ।
ದ್ಯಾವಂತಂ ಪೆರ್ಮೆವಡೆವನೆಂಬುದನಱಿದುಂ ॥
ಸಾವನ್ನೆವರಂ ಕಲ್ಲದೆ ।
ಕೇವಲಮೃಗದಂತೆ ಮನುಜರೇಕೆಯೊ ಬಳೆವರ್ ॥ 287 ॥

ಒಂದುಭವದಲ್ಲಿ ಮನುಜಂ ।
ಕುಂದದ ಕೌತುಕದಿನೊಂದೆ ವಿದ್ಯಾಧನಮಂ ॥
ಪಿಂದೇೞುಂ ಭವದೊಳಮದು ।
ಪಿಂದೆಯ್ದುತವಂಗೆ ಸೌಖ್ಯಮಂ ಸಾಧಿಸುಗುಂ ॥ 288 ॥

ತವಗಾನಂದಮನೊದವಿಸು ।
ವ ವಿದ್ಯೆಯಿಂದಿತರಜನಕಮಾನಂದಂ ಪು ॥
ಟ್ಟುವುದಂ ಕಂಡಿನ್ನುಂ ತ ।
ಮ್ಮ ವಿದ್ಯೆಯಂ ಪೆರ್ಚಿಸಲ್ಕೆ ಬಗೆವರ್ ಕಲ್ತರ್ ॥ 289 ॥
ಮನುಜಂಗಾಗೆಳುಮಱಿಯದ ।
ಧನಮೆಂಬುದು ಬಿಜ್ಜೆಯೆಂಬ ಧನಮೆ ವಲಂ ಮ ॥
ತ್ತಿನ ಕನಕರತ್ನರೂಪದ ।
ಧನಮಸ್ಥಿರಮನ್ಯಹಾರ್ಯಮಾಪಜ್ಜನಕಂ ॥ 290 ॥

---

41. ವಿದ್ಯೆಯನ್ನು ಕಲಿಯದಿರುವುದು.

ವಿದಿತವಿದಗ್ಧರ ಸಭೆಯೊಳ ।
ಗದಿರದೆ ವಿದ್ಯಾವಿಹೀನನೇನಾನುಂ ಪೇ ॥
ೞ್ವುದು ನೆತ್ತವಲಗೆಯಿಲ್ಲದೆ ।
ಚದುರಂಗಮನೊರ್ವನಾಡುವಂತೆವೊಲಕ್ಕುಂ ॥ 291 ॥

ಇನಿಸುಂ ಕಳೆಗಲ್ತುಱಿಯದ ।
ಮನುಜಂ ಬುಧಸಭೆಯೊಳುಸಿಱಲಾಟಿಪುದಾರ ॥
ಯ್ವಿನೆಗಂ ಸ್ತನಪಿಲ್ಲದ ಮಾ ।
ನಿನಿ ಪೆಣ್ತನಕಾಟಿಪಂತುಟೆಂಬರಭಿಜ್ಞರ್ ॥ 292 ॥

ತಮ್ಮಱಿಯುಮೆಯಂ ತಿಳಿಯು ।
ತ್ತುಂ ಮೇಧಾವಿಗಳೆನಿಪ್ಪ ಬದ್ದುಗರಿದಿರೊಳ್ ॥
ಕೆಮ್ಮನೆ ಮಾತುಂಗುಟ್ಟದೆ ।
ಸುಮ್ಮನಿರಲ್ಕಾರ್ಪೊಡೊಳ್ಳಿದರ್ ಕಲ್ಲದರುಂ ॥ 293 ॥

ಗುಣಬಹುಳಮಾದ ನುಡಿಯಂ ।
ಘುಣಾಕ್ಷರನ್ಯಾಯದಿಂದೆ ನುಡಿದೊಡೆ ಮೂಢರ್ ॥
ಗಣಿಸರದಂ ವಿದ್ಯಾಭೂ ।
ಷಣರವಿಮರ್ಶಪ್ರಭೂತಮಾದುದಱಿಂದಂ ॥ 294 ॥

ತನತು ತಿಳಿವಿಂಗೆ ಪಾಸಟಿ ।
ಯೆನಿಸುವ ತಿಳಿವಿಲ್ಲಮೆಂದು ಪೊಟ್ಟಳಿಸಿ ಕರಂ ॥
ತೊನೆವಜ್ಞನ ಕಾಮುಕರಂ ।
ಕೊನೆಗಾಣ್ಗುಂ ಪ್ರಾಜ್ಞರೊಡನೆ ಮಾತಾಡಲೊಡಂ ॥ 295 ॥

ಕಳೆಯಂ ಕಲ್ಲದೆ ವಸುಧಾ ।
ತಳಕ್ಕೆ ಪೊಱೆಯೆನಿಸಿ ಬಳೆದನಂ ಜನಮೀತಂ ॥
ಒಳನೆನ್ಗುಮನಿತೆ ಸಸ್ಯಂ ।
ಮೊಳೆಯದ ನೆಲನನೆನೆವನೆ ಜನಂ ವಿಫಲಂ ॥ 296 ॥

ಅನಧಿಗತವಿದ್ಯರೆನಿಸಿದ |
ಮನುಷ್ಯರೊಳ್ ತೋರ್ಪ ಸೊಬಗುಮುನ್ನತಿಕೆಯುಮೇಂ ||
ಮನಮುಂ ಸೆಳೆಗುಮೆ ಲಿಪ್ಪದ |
ಮನುಜನ ಸೊಬಗುನ್ನತಿಕ್ಕೆಗಳನವು ಪೋಲ್ಗುಂ || 297 ||

ಸಲ್ಲಲಿತಕಲಾಪರಿಣತ |
ರಲ್ಲಿರಲೆಡೆವಡೆದು ನಿಂದ ಬಡತನದಿಂದಂ ||
ಪೊಲ್ಲದು ನಿಸದಂ ಕಲೆಯಂ |
ಕಲ್ಲದ ಮೂರ್ಖರ್ಕಳಲ್ಲಿ ನಿಂದೈಶ್ವರ್ಯಂ || 298 ||

ವಿದ್ಯಾರಹಿತರ್ಕ್ಕಳ್ ನಿರ |
ವದ್ಯಮೆನಿಷ್ಪನ್ನವಾಯುದೊಳ್ ಪುಟ್ಟಿದೊಡಂ ||
ವಿದ್ಯೆಯನಾರ್ಜಿಸಿ ಜಸದಿಂ |
ದುದ್ಯೋತಿಪ ಹೀನಕುಲರ ಪೋಲ್ವೆಗೆ ಸಲ್ಲರ್ || 299 ||

ನರನಂ ಪಶುವಂ ಪೋಲಿಸಿ |
ಪರಿಕಿಸುವಂದೆನಿತು ತೋರ್ಕುಮಂತರಮನಿತಂ ||
ತರಮೆಯ್ದೆ ತೋರ್ಕುಮಧಿಗತ |
ವರವಿದ್ಯನನಜ್ಞನೊಡನೆ ಪೋಲಿಸುವಾಗಳ್ || 300 ||

---

## 43. ಅರಿವು.

ಅಱಿವು ಮನುಜಂಗೆ ಕೇಡಂ |
ಪಱಿಯಿಸುವೊಳ್ಗೆಯ್ದುವಕ್ಕುಮಾತಂಗದು ಮೇಣ್ ||
ಮಱುವಸಲರ್ ಮಾಮುಸಕದಿ |
ನಿಱಿದಱಿಯಲ್ಕೆಂದುಮಾಗದೊಳಕೋಂಟೆ ವಲಂ || 301 ||

ವಿಸಟಂಬರಿಯಲ್ಕೆಡೆಗುಡ |
ದಸಾಧುಪಥದತ್ತಣಿಂದೆ ತೊಲಗಿಸುತುಂ ಮಾ ||
ನಸಮುಂ ಸದ್ವಿಷಯಂಗಳೊ |
ಳೆ ಸಂತತಂ ಪೋಗಲೀವುದೇ ಅಱಿವೆನಿಕುಂ || 302 ||

ಪಗೆವರ್ ನೇಹಿಗರೆನ್ನದೆ |
ಸುಗುಣರ್ ಗುಣಹೀನರೆನ್ನದಾರಾರೇನಂ ||
ನಿಗದಿಸೆಯುಂ ಕೇಳ್ದದಱ |
ಲ್ಲಿ ಗುಣಗ್ರಹಣಮನೆಸಪ್ಪುದೇ ಅಱಿವೆನಿಕುಂ || 303 ||

ಪರರೆರ್ದೆಯಂ ಪುಗುವಂತಿರೆ |
ಸರಸೋಕ್ತಿಗಳಿಂದೆ ಗೂಢವಿಷಯಂಗಳುಮಂ ||
ನಿರವಿಸಿ ಪರರುಕ್ತಿಗಳೊಳ |
ಗರಿದೆನಿಪಾಶಯಮನೂಹಿಸುವುದಱಿವೆನಿಕುಂ || 304 ||

ಕೆಳೆಯಂ ಗುಣಶಾಲಿಗಳೊಳ್ |
ಬಳೆಯಿಸುವುದಱಿಂದಮೊಳ್ಪು ಸಮ್ಮನಿಸುಗುಮಾ ||
ಕೆಳೆ ವಿಕಸನಸಂಕೋಚಂ |
ಗಳನೊಂದದ ತೆಱದೆ ನಿಱಿವುದೇ ಅಱಿವೆನಿಕುಂ || 305 ||

ಎಂತುಂ ತಾಂ ಲೋಕಕ್ಕೆ ಮ |
ಹಾಂತನೆನುತ್ತೊಲ್ದ ತೆಱದೆ ವರ್ತಿಸದನುವಿಂ ||
ದೆಂತುಟು ಲೋಕಂ ವರ್ತಿಪು |
ದಂತುಟು ವರ್ತಿಸುವುದಱಿವು ಮನುಜಂಗಿಳೆಯೊಳ್ ||306||

ಆರಯ್ದು ಮುಂದೆ ಬರ್ಪುದ |
ನೋರಂತ್ರಱಿಯಲ್ಕೆ ಸಾಲ್ವ ಮನುಜರೆ ಅಱಿದರ್ ||
ಆರೀತಿಯಿಂದೆ ಬರ್ಪುದ |
ನಾರಯ್ದುಱಿಯಲ್ಕೆ ನೆಱೆಯದರೆ ಅಱಿಯದವರ್ || 307 ||

ಪಟಿಗಂ ಪಾಪಕ್ಕಂ ಪು |
ಚ್ಚಟಿಗಂ ಬೆಳ್ಕುಱದೆ ಬೆಱೆವುದಱಿಯುಮೆಯೊನಸುಂ ||
ಪಟಿಗೆಂಜಿ ಪಾಪಕೆಡೆಗುಡ |
ದಟಿವೆಯ್ದುದ ತೆಱದೆ ನೆಗಟ್ವುದಱಿದರ ಕೃತ್ಯಂ || 308 ||

ತಮ್ಮಯ ಮತಿಕೌಶಲದಿಂ |
ದಂ ಮುಂದೆಯ್ದುವುದನಱಿದು ತಕ್ಕುದನೆಸಪ ||
ಗ್ಗರ್ನಮ್ಮಳಿಸಿ ನಡುಗುವಂತಿರೆ
ಸಮ್ಮನಿಸುವ ಸಂಕಟಂಗಳಾವುವುಮಿಲ್ಲಂ || 309 ||

ಅಱಿವೊಂದೊರ್ವಂಗುಳ್ಳೊಡೆ |
ಪೆಱತಾವುದುಮಿಲ್ಲದಿರ್ದೊಡಂ ಪೂರ್ಣನವಂ ||
ಅಱಿಪಿಲ್ಲದೆ ಮತ್ತೆಲ್ಲಂ |
ನೆಱೆದಿರ್ದೊಡಮೇನೊ ಬಱುವನಾತಂ ದಿಟದಿಂ || 310 ||

---

## 46. ಅಲ್ಪರ ಸಹವಾಸವಿಲ್ಲದಿರುವುದು.

ಪಿರಿಯರ್ ತಳ್ಳಂಕಂಗೊ |
ಳ್ವರಲ್ಪರೊಳ್ ಬೆರೆಯಲಧಮರಂತಪ್ಪವರೊಳ್ |
ಬೆರೆಯಲ್ಕಾಟಿಸುವರ್ ಮೇಣ್ |
ಬೆರೆವಾಗಳೆ ಕೆಳೆಯರೆಂದು ಭಾವಿಪರವರಂ || 311 ||

ಒಡನಾಡಿಯ ಗುಣದಿಂ ಬೇ ।
ರ್ಪಡುಗುಂ ಮಾನವನ ಗುಣಮುಮಱಿವುಂ ಮುಗಿಲಿಂ ॥
ಪೊಡವಿಗೆ ಬೀೞ್ವ ಜಲಂ ಬೇ ।
ರ್ಪಡುವಂತಿರೆ ನೆಲದ ಗುಣದೆ ತನ್ನಯ ಗುಣದೊಳ್ ॥312॥

ಮನಮೇ ಕಾರಣಮಾಗಿರೆ ।
ಮನುಜರ್ಗ್ಗರಿವುದಯಿಪುದು ತಿಳಿವು ಮೇಣಾತಂಗೆ ॥
ಳ್ಗನುಷಂಗಮೆ ಕಾರಣಮಾ ।
ಗೆ ನೆಟ್ಟನುದಯಿಪುದು ವೃತ್ತಿವೈಲಕ್ಷಣ್ಯಂ ॥ 313 ॥

ಹೃದಯದೊಳಿರ್ದಂತಿರೆ ತೋ ।
ಱದೊಡಂ ಕೆಲಕೆಲವು ಭಾವನೆಗಳಾರಯ್ವಂ ॥
ದುದಯಿಸಿದುವೆ ದಲ್ ಸಂಸ ।
ರ್ಗದಿಂದಮವು ನೆಟ್ಟನೆಂದು ತಿಳಿಯಲ್ಬಕ್ಕುಂ ॥ 314 ॥

ಚಿತ್ತದೊಳಕಳಂಕತೆಯುಂ ।
ವೃತ್ತದೊಳಮಲೀಮಸತ್ವಮುಂ ಮನುಜಂಗು ॥
ತ್ಪತ್ತಿವಡೆದಪುವು ಪಾವನ ।
ವೃತ್ತರ ಸಹವಾಸದತ್ತಣಿಂದಂ ಧರೆಯೊಳ್ ॥ 315॥

ಅಕಳಂಕಮಾನಸರ್ಗ್ಗುದ ।
ಯಿಕುಮುತ್ತಮಗುಣವಿಭೂಷಿತಂ ಸಂತಾನಂ ॥
ಅಕಳಂಕರ ಸಹವಾಸದಿ ।
ನಕೃತ್ಯಮೆನಿಸುವುದನೆಂದುಮೆಸಗರ್ ಮನುಜರ್ ॥ 316 ॥

ಸಿರಿಯೋಲಗಿಸುಗುಮಂತಃ |
ಕರಣದೆ ಕೌಟಿಲ್ಯಕೆಡೆಯನೀಯದ ನರನಂ ||
ಪರಿಶುದ್ಧರ ಸಹವಾಸಂ |
ದೊರೆಕೊಳೆ ಸಿರಿಯೊಡನೆ ಜಸಮುಮೊಂದುಗುಮವನಂ||317||
ಆಭವದ ಸಯ್ಪಿಸಾರ್ಯ |
ಗ್ರೀಭವದೊಳ್ ಭಾವಶುದ್ಧಿಯೊದವಿರೆಯುಂ ಶ್ರೀ ||
ಳಾಭರಣರ ಸಂಗದಿನದು |
ಶೋಭೆಯುನಾಳುತ್ತೆ ದಿನದಿನಕ್ಕಗ್ಗಲಿಕುಂ ||318||
ಮಾನಸದ ನಲ್ಮೆಯಿಾಗುಂ |
ವಾನಸರ್ಗಪವರ್ಗಸುಖಮುನದಱೀವ ಗುಣಂ ||
ಪೀನಂ ಪೆರ್ಚುಗುಮುಮಲಗು |
ಣಾನೀಕವಿಭೂಷರೊಳ್ ಸಮಾಗಮದಿಂದಂ ||319||
ಪಿರಿಯರ ಸಂಗಮದಿಂದಂ |
ಪಿರಿದೆನಿಸುವ ಸೌಖ್ಯಸಾಧನಂ ಮತ್ತಿಲ್ಲಂ ||
ದುರಿತಾತ್ಮರ ಸಂಗಮದಿಂ |
ಪಿರಿದೆನಿಸುವ ದುಃಖಹೇತುವಾವುದುಮಿಲ್ಲಂ ||320||

---

### 61. ಸೋಮಾರಿತನವಿಲ್ಲದಿರುವುದು.

ಕುಲಮೆಂಬುಜ್ಜ್ವಲದೀಪಂ |
ಕುಲಜರನುದ್ಯೋಗಮೆಂಬ ಕಟ್ಟಿಲೆಯಿಂದು ||
ಜ್ಜ್ವಲತೆಯನುಟಿಗುಂ ಮುಸುಳ್ಗುಂ |
ವಿಲುಪ್ತಮಕ್ಕುಂ ವಿಚಿತ್ರಮಾಲಸ್ಯತಮಂ ||321||

ಉದಯಿಸಿದ ವಂಶದೇಪ್ಗೆಯ |
ನೊದವಿಸಲುಂ ಜಸಮನೆತ್ತಲುಂ ಪಸರಿಸಲುಂ ||
ಪದೆದೆಳಸುವ ಮನುಜಂ ತ |
ಳ್ವದೊರ್ಮೊದಲ್ ಕಳೆಗೆ ತನ್ನನುದ್ಯೋಗಿತೆಯಂ ||322||

ತೊಲಗಿಸವೇಟ್ಟಲಸಿಕೆಯಂ |
ತೊಲಗಿಸದದು ನೆಲಸೆ ತನ್ನೊಳೆಡೆಮಾಡುವ ಗಾ ||
ವಿಲಸಟಿವಮುನ್ನಮಾತನ |
ಕುಲಮಟಿಗುಂ ಪೇಟೆ ಪೆಸರುಮಿಲ್ಲದ ತೆಱದಿಂ ||323||

ಆಲಸ್ಯಮೆಂಬ ದೃಢತರ |
ಜಾಲದ ತೊಡರಲ್ಲಿ ಪೊಕ್ಕು ನಿಶ್ಚೇಷ್ಟತೆಯಂ ||
ಪಾಲಿಪ ಮನುಜರ್ ತಮಗಂ |
ಮೇಲೆನಿಸಿದ ತಮ್ಮ ಕುಲಕಮುಮರಿಪರಟಿವಂ ||324||

ಚಿರಕಾರಿತೆ ನಿದ್ರಾತ |
ತ್ಪರತೆ ನಿರುದ್ಯೋಗಮುನವಧಾನಮಿವಟಿವಾ ||
ವರಿಸಿದ ಮಾನಸರತ್ಯಾ |
ದರದಿಂದೇಱುವ ಪಡಂಗು ಕಳೆಗಿವನಱಿದಂ ||325||

ಇಲೆಯುಂ ರತ್ನಾಕರಮೇ |
ಖಲೆಯುಂ ಮಾರ್ಮಲೆವರಿಲ್ಲದಾಳ್ವರಸನ ನಿ ||
ಸ್ತುಲವಿಭವಂ ದೊರೆಕೊಳ್ವೊಡ |
ಮಲಸುಂಗಾಱಂಗೆ ಪಡೆಯದದು ಚಿರಸುಖಮುಂ ||326||

ಕೆಲಸಮನೇನುಮನೊಡರಿಸ ।
ದಲಸತೆಯಂ ಒಯುಸಿ ಬಾಟ್ಸ್ನಾಂಬರ್ ಹಾಲಾ ॥
ಹಲದಿಂಡಂ ಕ್ರೂರಮನಿ ।
ಪ್ಪಲಘುವಿಗೆರ್ಹಣಮನಾಲಿಪರ್ ಕ್ರಿಯುಸಖರಿಂ ॥327॥
ಪಾರಂಪರ್ಯದೆ ಪಾರಾ ।
ವಾರಪರೀತಾವನೀಶನಾದೊಡಮೊರ್ವಂ ॥
ಬೇರೂಱಲವನೊಳಲಸಿಕೆ ।
ಸಾರಿಕುಮದವಂಗೆ ದಾಸ್ಯಮಂ ವೈರಿಗಳೊಳ್ ॥328॥
ಜಡತೆಯುನುಟಿದುದ್ಯೋಗಮ ।
ನೆಡೆವಿಡದೊಡರಿಸಿದೊಡೊರ್ವನದಱಿಂದೆ ಪಡ ॥
ಲ್ವಡುಗುಮವಂ ಪುಟ್ಟಿದ ಕುಲ ।
ದೆಡೆಯೊಳಮಾತನೊಳಮಡರ್ದ ಪಲವುಂ ದೋಷಂ ॥329॥
ಇಳೆಯೆಲ್ಲಮನೊಂದಡಿಯಿಂ ।
ದಳೆದ ಜಗತ್ಪತಿಯ ಚರಣಕಮಲದ ಸೋಂಕಂ ॥
ತಳೆದ ಸಕಳೋರ್ವಿಯುಂ ಕರ ।
ತಳಗತಮಾಲಸ್ಯಕೆಡೆಯನೀಯದ ನೃಪನಾ ॥330॥

---

## 79. ಸ್ನೇಹ.

ಕೆಳೆತನದವೋಲೊಂದಲ್ಕಸ ।
ದಳಮೆನಿಸುವ ಲಾಭಮುಂಟೆ ಮನುಜಂಗದು ಸಂ ॥
ಗಳಿಸಿದೊಡದಱವೊಲುಂಟೇ ।
ಪಳಂಚುವರಿಗಳ್ಗೆ ಭೇದ್ಯಕೋಟಾವಳಯುಂ ॥331॥

ಎಳವೆಱೆಯಂತಿರೆ ಸುಜನರ ।
ಕೆಳೆ ಪರಿವಿಡಿಯಿಂದೆ ಪೆರ್ಚಿ ಬಳೆಗುಂ ನೆಱೆದಿಂ ॥
ಗಳ ತೆಱದಿಂದಂ ನೀಚರ ।
ಕೆಳೆ ಪರಿವಿಡಿಯಿಂದೆ ಕುಂದಿಯೊಂದುಗುಮುಱಿವಂ ॥332॥

ಕಲೆ ಕಲೆ ಕಲೆಯಂ ಕಲ್ತಂ ।
ಗೊಲವದಱೊಳ್ ಪುಟ್ಟೆ ಮನಮನಲರಿಪ ತೆಱದಿಂ ॥
ಸುಲಲಿತಗುಣರೊಳ್ ಸಖ್ಯಂ ।
ಸಲೆ ಸಲೆ ಕೆಳೆಗೊಂಡವಂಗೆ ಸೊಗಮುಗ್ಗಲಿಕುಂ ॥333॥

ನಗೆಯಂ ನರ್ಮಾಲಾಪದಿ ।
ನೊಗೆಯಿಸಲಲ್ತೊರ್ವನೊರ್ವನೊಳ್ ಸೌಹೃದಮಂ ॥
ಬಗೆಬಯಸಿ ಬಿತ್ತರಿಸುವುದು ।
ತಗದುದನೆಸಪಂದು ಜಡಿದು ಮಾಣಿಸಲೆ ವಲಂ ॥334॥

ಒಂದೂರೊಳ್ನೆಲಸುವುದುಂ ।
ಸಂದಿಸಿ ಪಲಸೂಪೊಱಲ್ದು ಮಾತಾಡುವುದುಂ ॥
ಒಂದಿಸಲೇಂ ನೆಱೆವುವೆ ಕೆಳೆ ।
ಯಂ ದೊರೆಕೊಳಿಸಲ್ಕೆ ಭಾವಸಾಮ್ಯಂ ನೆಱೆಗುಂ ॥335॥

ಬಗೆದಾವರೆಯಲರಲರದೆ ।
ಮೊಗದಾವರೆಯೊಂದೆ ಮಲರೆ ಮಾಡಿದ ಸಖ್ಯಂ ॥
ಸೊಗೆಯಿಸುಗುಮೆ ಬಗೆದಾವರೆ ।
ಮೊಗದಾವರೆಯೆರಡುಮಲರೆ ಮಾಟ್ಪುದೆ ಸಖ್ಯಂ ॥336॥

ಉದ್ವೇಗಮನಿರದೊಡವಿಸು |
ವುದ್ವೃತ್ತತೆಯಂ ಕಟಿಲ್ಚಿ ಸೂಕ್ತಿಗಳಿಂದಂ ||
ಸದ್ವೃತ್ತದಲ್ಲಿ ನಿಱಿಸಿ ಸು |
ಹೃದ್ವರನೊಡನಿರ್ದು ದುಃಖಭಾಗಿಯುಮಪ್ಪಂ || 337 ||

ಉಡೆ ಸಡಿಲಲೊಡಂ ನಾಣಂ |
ಕಡುವೇಗದಿನೆಯ್ದಿ ಕಾವ ಕೆಯ್ಯಂತಿರೆ ಸಂ ||
ಗಡಿಸಲೊಡಂ ದುಗುಡಮುದಂ |
ತಡೆಯದೆ ಮುಂಬರಿದು ಕಿಡಿಪುದೇ ಕೆಳೆಯೆನಿಕುಂ || 338 ||

ಧರ್ಮಾಚರಣಕ್ಕಲಸಿದೊ |
ಡೊರ್ಮೊದಲಲಸಿಕೆಯನಿಕ್ಕಿ ಮೆಟ್ಟುವರೆಂದುಂ ||
ನಿರ್ಮತ್ಸರಭಾವರಜಿ |
ಕ್ಕ್ಯಾರ್ಮಮೆನಿಪ್ಪರ್ ವಿಕಾರರಹಿತರ್ ಮಿತ್ರರ್ || 339 ||

ಎವಗೆವರಿನಿತ್ತು ಕೂರ್ತಪ |
ರವರ್ಗಾಂ ಕೂರ್ತ್ತಪ್ಪೆವಿನಿತೆನುತ್ತೋರೊರ್ವರ್ ||
ತವತವಗೆ ಪೊಗಟ್ದು ಕೊಳಲೊಡ |
ಮವರೊಳ್ ನೆಲೆಗೊಂಡ ಕೆಳೆಯ ಗೌರವಮುಟಿಗುಂ || 340 ||

---

## 101. ನಿಷ್ಪ್ರಯೋಜನವಾದ ಐಶ್ವರ್ಯ.

ಅಳವಿಲ್ಲದ ಧನಮುಂ ಸಂ |
ಗಳಿಸಿರ್ದೊಡಮಧಿಕಲೋಭದಿಂದನುಭವಿಸ ||
ಲ್ಕೆಳಸದ ಮಾನಸನಸುವಂ |
ತಳೆದಿರ್ದೊಡಮೇನೊ ನೋಡೆ ಸತ್ತವನೆ ವಲಂ || 341 ||

ಧನವೊಂದಱಿನೆಲ್ಲಂ ಸ |
ಮ್ಮನಿಸುಗುಮೆಂದಱಿದು ಗಟಿಸಿ ಪೆಱರ್ಗೀಯದ ಬಿ ||
ಳ್ತನದಿಂದಂ ಮಱುಮೆಯ್ಯೊಳ್ ||
ಮನುಜಂ ಮರುಳಾಗಿ ಪುಟ್ಟ ಕೋಟಲೆಗೊಳ್ವಂ || 342 ||

ತನಗೆ ದೊರೆಯಾರುಮಿಲ್ಲೆಂ |
ಬಿನಮರ್ಜಿಸಿ ಧನಮನದನೆ ದೇವತೆಯೆನುತುಂ ||
ನೆನೆದಡಱಿಂದೊಳ್ಜಸಮಂ |
ತನಗೊಡರಿಸಲೆಳಸದಾತನವನಿಗೆ ಪೊಱೆ ದಲ್ || 343 ||

ಪೆಱರ್ಗೇನುಮನೆಂದುಂ ಕೊ |
ಟ್ಟಱಿಯದ ಕತದಿಂ ಸವಾರ ಮನದೊಳವೊಲವಂ ||
ತೊಱೆಯಿಸಿ ಬಾಳ್ವಂ ಜೀವಂ |
ದೊಱೆವಂದುಟಿವಂತುಟೇನನಿಲ್ಲಿರಿಸುವನೋ || 344 ||

ದೀನರ್ಗಾದರದಿಂದಂ |
ದಾನಮನೊಡರಿಸದ ತಾನುಮನುಭವಿಸದ ಕೀ ||
ಟ್ಟಾನೆಸನೊಳ್ ಧನರಾಶಿಯು |
ನೂನಮೆನಿಪ್ಪೊಡಮವಂ ದರಿದ್ರಂ ದಿಟದಿಂ || 345 ||

ಉಡದುಣ್ಣದೆ ಸತ್ಪಾತ್ರಕೆ |
ಕುಡದರ್ಥಮನೆಟ್ಟಿಱಿಂದಮಾರಾಧಿಸುತುಂ ||
ಮಡಗುವ ಜಡಮತಿಯಾ ಧನ |
ಕಡಸಿದ ಕುತ್ತಂ ದಲೆಂದು ಭಾವಿಸರಱಿದರ್ || 346 ||

ಉಡಲುಣಲಿಲ್ಲದೆ ಮಱುಗುವ |
ಬಡವರ್ ಬೇಡಿದುದನೊಂದನೀಯದನ ಧನಂ ||
ಪಡೆಯದೆ ಪತಿಯಂ ವಾರ್ಧಕ |
ಕೆಡೆಯಪ್ಪಳ ಸೊಬಗಿನಂತೆ ನಿಷ್ಫಳಮಲ್ತೇ || 347 ||
ಬಡವರ್ಗೊಲವಿಂ ಸಾಹ್ಯಮ |
ನೊಡರಿಸದವರೆಡೆಯೊಳಿರ್ಪ ವಿತ್ತಸಮೂಹಂ ||
ನಡುವೂರೊಳಗಿರ್ಪಿಟ್ಟಿಯೊ |
ಳಡಕಿಲ್ಗೊಂಡೆಸೆವ ಪಣ್ಗೆ ಪಾಸಟಿಯಕ್ಕುಂ || 348 ||
ಕಡೆಗಣಿಸಿ ಧರ್ಮಮಂ ಕಡು |
ಬಡವರ್ಗುಪಕರಿಸದಾರ್ತರೊಳ್ ಮಱುಗದೆ ತಾ ||
ನುಡದುಣ್ಣದೆ ಬಱಲುತ್ತುಂ |
ಜಡಮತಿಯರ್ಜಿಸಿದ ಧನಕೆ ಭೋಗಿಗಳನ್ಯರ್ || 349 ||
ಮಿಗೆ ತಮ್ಮೈಸಿರಿಯಿಂದಂ |
ಸೊಗೆಮಂ ಜಗಕೊಡರಿಪರ್ಗೆ ಬರೆ ದಾರಿದ್ರ್ಯಂ ||
ಜಗಮಂ ಬಱಿದಿಂ ರಕ್ಷಿಪ |
ಮುಗಿಲ್ಗೆ ಬಱಿಮುಡಸಿದಂತುಟೆಂಬರ್ ಪಿರಿಯರ್ || 350 ||

---

## 105. ಬಡತನ.

ಬಡತನದಂತೆಪೊಲಾವುದು |
ಪೊಡವಿಯೊಳೊದವಿಪುದು ದುಗುಡಮಂ ಮನುಜಂಗೆಂ ||
ದೆಡೆವಿಡದಾಲೋಚಿಸಿ ನೋ |
ಡ್ಪೊಡೆ ಬಡತನದಂತೆ ದುಃಖದಂ ಬಡತನಮೇ || 351 ||

ದಾರಿದ್ರ್ಯಮೆಂಬ ಪಾತಕಿ ।
ಯಾರಿಡೆಯುಂ ಸಾರ್ಗುಮಾತನೈಹಿಕಸುಖಮುಂ ||
ಪಾರತ್ರಿಕಸುಖಮುಂ ಮೇಣ್ ।
ದೂರಕೆ ತೊಲಗಿಸುತೆ ತಾನೆ ನೆಲಸುಗುಮುಕಟಾ || 352 ||

ಜನಿಯಿಸಿದಭಿಜನಕನುಗುಣ ।
ಮೆನಿಸಿದ ನಡೆವಳಿಯನಂತುಟೊಳ್ಕುಡಿಯುಂ ನೆ ||
ಟ್ಟನೆ ಮನುಜನೊಳಟಿಗುಂ ನಿ ।
ರ್ಧನತೆಯು ನೀಚತೆಯನರಿದು ಬಣ್ಣಿಸಲಾರ್ಗಂ || 353 ||

ಮಾನಾರ್ಹಮಾದ ಕುಲದೊಳ ।
ನೂನಗುಣಾಭರಣರೆನಿಸಿ ಜನಿಯಿಸಿದರುಮಂ ||
ದೀನೋಕ್ತಿಗಳಂ ನುಡಿಯಿಸಿ ।
ಮಾನಕ್ಷತಿಯಂ ನಿಮಿರ್ಚುಗುಂ ದಾರಿದ್ರ್ಯಂ || 354 ||

ಬಡತನವೆಂಬದವಟಿಲೊಂ ।
ದಡಸಲೊಡಂ ಮಾನಸಂಗೆ ಮತ್ತಿನಟಿಲ್ಗಳ್ ||
ಸಡಗರದಿಂ ಬೆನ್ನನೆ ಸಂ ।
ಗಡಿಸುತ್ತಿಯ್ದುವುವು ಭೃತ್ಯತತಿಯೆಂಬಿನೆಗಂ || 355 ||

ವಿತತಕಲಾತತಿಯೊಳ್ ಪರಿ ।
ಣತಿಯಂ ಸೂಚಿಸುವ ಸರಸಫಣಿತಿಗಳಂ ಸಂ ||
ಗತಮಾಗೆ ನುಡಿದೊಡಂ ದು ।
ರ್ಗತರವು ಕಾನನದ ಜೊನ್ನದಂತಿರೆ ವಿಫಲಂ || 356 ||

ಬಸಿಱೊಳ್ ನವಮಾಸಂ ಪೊ ।
ತ್ತು ಸಂತತಂ ಪ್ರೀತಿಯಿಂದೆ ನಡಪಿದ ತಾಯುಂ ॥
ನಸಿಯಿಪ ನಿಸ್ಸ್ವತೆಗೆಡೆಯಾ ।
ದ ಸೂನುವೊಳ್ ಸ್ವೀಯಬುದ್ಧಿಯಂ ತೊಲಗಿಸುವಳ್ ॥357॥
ಕೊಂದಂತಿರಟಿಲನೊದವಿಸಿ ।
ದಂದುಗದೊಳ್ ನಿನ್ನೆಯೆನ್ನನಟ್ಟಿದೆಡರ್ ವು ॥
ತ್ತಿಂದುಂ ಬಂದಟಿಲಿಸುವುದೊ ।
ಎಂದಧನಂ ಚಿಂತಿಸುತ್ತೆ ದಿನಮುಂ ಕಳೆವಂ ॥358॥
ಇಡುಗಿಚ್ಚಿನೊಳಿಂತಾನುಂ ।
ಪಡಲಕ್ಕುಂ ಮಂತ್ರಮೂಲಿಕಾಬಲದಿಂದಂ ॥
ಬಡತನಮಾವರಿಸಲೊಡಂ ।
ಪಡೆಯಲ್ ನಿದ್ರೆಯನದಾರ್ಗಮುರಿದೇಗೆಯ್ದುಂ ॥359॥
ಬಡತನದಿಂ ಕಡುದುಗುಡ ।
ಕ್ಕೆಡೆಯಾಗುತ್ತಿರ್ಪುದೊಡಂ ಧಿಕ್ಕಾರಂ ॥
ಬಡೆಯುತೆ ಬಾಳ್ವಂ ಪರಗೃಹ ।
ದಡುಗೊಟ್ಟನೀರುಪ್ಪುಗಳ್ಗೆ ಲಯಮುಂ ಮಾಳ್ಪಂ ॥360॥

---

## 106. ಬೇಡುವುದು.

ಬೇಡಲ್ ಬಗೆವೊಡೆ ಮನುಜಂ ।
ಬೇಡುಗೆ ಬೇಡಲ್ಕೆ ತಕ್ಕುದಾತ್ತನನಾತಂ ॥
ನೀಡದೊಡೆ ಬೇಳ್ಪ ಪುರುಳಂ ।
ಬೇಡಿದವಂಗಿಲ್ಲ ದೋಷಮಾತಂಗೆಕ್ಕುಂ ॥361॥

ಕುಡುವರ ವಿವೇಕದಿಂ ತನ |
ಗೆಡರುಂ ಮನಕತಮುಮಿಲ್ಲದಂತೀಹಿತಮುಂ ||
ಪಡೆಯಲ್ಕಾರ್ಪೊಡೆ ಮನುಜಂ |
ಪೊಡವಿಯೊಳಾನಂದದಾಯಕಂ ಯಾಚನೆಯುಂ ||362||

ಎರೆವರ್ಗ್ಗಿಲ್ಲೆನ್ನದ ಬೇ |
ಳ್ಪರ ಮಾನಮನಱಿವುದಾರಗುಣರಿದಿರೊಳ್ ನಿಂ ||
ದೆರೆವುದುಮಾರಯೆ ಶೋಭಾ |
ಕರಮೆ ವಲಂ ನಿರ್ಧನಾಳಿಗೆಂಬರ್ ತಿಳಿದರ್ ||363||

ಕನಸಿನೊಳಂ ತಮುಗು...ಳ್ಳದ |
ನಿನಿಸುಂ ಮಱಿಸದ ವದಾನ್ಯರಿಡೆಗೆಯ್ದುತ್ತುಂ ||
ಮನದೊಳ್ ಬಯಸಿದುದಂ ಯಾ |
ಚನೆಗೆಯ್ವುದುಮಾವುದಕ್ಕೆ ತೊಣೆಯೆನಲಕ್ಕುಂ ||364||

ಇದಿರಲ್ಲಿ ನಿಂದಮಾತ್ರದೆ |
ಹೃದಯದಭೀಪ್ಸಿತಮನಱಿದು ಚಾಗದ ಪೆಂಪಂ ||
ಮುದದಿಂ ಮೆಱೆವರ್ ಕೆಲರಿ |
ರ್ಪುದಱಿಂದಸುನೀಗದೆರೆದಪರ್ ಮಾನಧನರ್ ||365||

ದಾನಮನೊಂದಲ್ ಬಂದ |
ರ್ಗ್ಗೇನುಮನಿಲ್ಲೆನ್ನದೀವರಂ ಕಂಡಾಗಳ್ ||
ಮಾನಮನುಳಿಯದೆ ಬೇಡುವ |
ದೀನರ ನಿಸ್ಸ್ವತೆಯುಟಲ್ಗಳೆಲ್ಲಂ ಕಿಡುಗುಂ ||366||

ಅವಮತಿಗೆಯ್ಯದೆ ಪಟಿಯುದೆ ।
ತನಗುಳ್ಳುದನಿತ್ತು ಚಾಗಮಂ ಮೆಱೆವವರಂ ॥
ಅವಲೋಕಿಸೆ ಬೇೞ್ಪರ ಚಿ ।
ತ್ತವಲದ್ವಾರ್ನಂದಪೂರದಿಂ ಪೂರಿಸುಗುಂ ॥367॥

ಎರೆವವರಿಲ್ಲದೊಡಾರುಂ ।
ಶರನಿಧಿಪರಿವೇಷ್ಟಿತಾವನೀಮಂಡಲದೊಳ್ ॥
ನರರೆಡೆಯಾಟಂಗಳ್ ನೋ ।
ಡೆ ರಶ್ಮಿಯಿಂ ಚಲಿಪ ಬೊಂಬೆಯೆಡೆಯಾಟಂಗಳ್ ॥368॥

ದಾನಮನಾನಲ್ಕಾಟಿಪ ।
ದೀನರ್ ತಮ್ಮೆಡೆಗೆ ಬಾರದಿರೆ ವಿತರಣದು ॥
ದ್ಯಾನಿಯನೆಂತುಟು ಮೆಱೆವರ ।
ಸೂನಯುಶೋಲತೆಯನೆಂತು ನಿಲಿಪರುದಾರರ್ ॥369॥

ಬೇಡಿದ ವಸ್ತುವನಾಗಡೆ ।
ನೀಡದವಂಗೊನೆಲದಿಕ್ಕೆ ಬೇಡುವರರ್ಥಂ ॥
ಮೂಡದು ನೆನೆದಂದೆಂಬುದು ।
ನಾಡೆಯುಮನುಭವದಿನವರ್ಗೆ ತಿಳಿದಿರ್ಪುದಱಿಂ ॥370॥

---

108. **ನೀಚತನ.**

ಪರಿಜಿಂದೆಲ್ಲಂದದೊಳಂ ।
ನರರಂ ಪೋಲ್ತಿರ್ಪರಕಟ ನೀಚರವರ್ಗ್ಗಂ ॥
ನರರ್ಗಂ ತೋಱುವ ಸಾಮ್ಯಂ ।
ಧರೆಯೊಳ್ ದೊರೆಕೊಳ್ಳದಿತರಜಾತಿದ್ವಯದೊಳ್ ॥371॥

ತಮ್ಮೊಳ್ಪನಱಿವ ಮಾನಸ ।
ರಿಂ ಮಿಗೆ ಸುಖಿಗಳ್ ದುರಾತ್ಮರೆಂಬರ್ ಪಿರಿಯರ್ ॥
ತಮ್ಮೊಳ್ಪಿಂಗವರಂತಿವ ।
ರುಮ್ಮಳಿಸಲ್ವೇಡದಿರ್ಪ ಕಾರಣದಿಂದಂ ॥372॥

ಖಳರಾರಯ್ವೊಡೆ ದೇವ ।
ರ್ಕಳ ಪೋಲ್ವೆಗೆ ಸಲ್ವರೆಂಬರಱಿದರ್ ದೇವ ॥
ರ್ಕಳವೋಲ್ ನಿಯಮಿಪರಿಲ್ಲದೆ ।
ಖಳರುಂ ತಮ್ಮೊಲ್ದ ತೆಱದೆ ವರ್ತಿಸುವುದಱಿಂ ॥373॥

ಸ್ವೈರಪ್ರವೃತ್ತಿಯೊಳ್ ತಮ ।
ಗೋರಗೆಯೆನಿಸದೆ ನೆಗೞ್ವರಂ ಕಂಡಾಗಳ್ ॥
ದೂರೀಕೃತಸುಪಥರಹಂ ।
ಕಾರದೆ ಬೀಗುತ್ತುಮಾವೆ ಪಿರಿಯರೆವೆಂಬರ್ ॥374॥

ನಯವಿರಹಿತರೆಂದಾನುಂ ।
ನಿಯಮಮನನುಸರಿಪರಪ್ಪೊಡದು ದಲ್ ಶಿಕ್ಷಾ ॥
ಭಯದಿಂದಂ ಮೇಣ್ ಲಾಭದ ।
ಬಯಕೆಯಿನಕ್ಕುಂ ಸ್ವಭಾವದಿಂದಲ್ಲೆಂದುಂ ॥375॥

ಪೆಱರೆಡೆಗೆ ಪೋಗಿ ನೀಚರ್ ।
ಮಱಸಲ್ವೇಡಿದ ರಹಸ್ಯವಿಷಯಂಗಳನ ॥
ಟ್ಕಱಿನುಸಿರ್ವ್ರದಱಿಂದಮವರ್ ।
ಪಱಿಗೋರಗೆಯಪ್ಪರೆಂಬರನವದ್ಯಗುಣರ್ ॥376॥

ಕದಪನೊಡೆಯಲ್ಕೆ ಕೆಯ್ಯಂ ।
ಪದೆದೆತ್ತುವರ್ಗಿೀವರಲ್ಲದುಟಿದರ್ಗ್ಗೆ ಖಳರ್ ॥
ಬಿದಿರರ್ ಬೇಡ್ಪೊಡಮುಗುಟಿಂ ।
ಟಿದ ಕೆಯ್ಯುಮನುಂಡಬಟಿಕಮುಱಿಯುಮೆಯೆಂತೋ ॥377॥

ದೀನರ್ ಬಂದೆರೆಯಲೊಡಂ ।
ಮಾನಿತಗುಣರೀವರುಳ್ಳುದಂ ನಲವಿಂದ ॥
ನ್ಯೂನಬಲರಿಱಿದು ಮರ್ದಿಸೆ ।
ಹೀನಗುಣರ್ ಕರ್ಬಿನಂತಿರುಳ್ಳುದನೀವರ್ ॥378॥

ಮಿಱುಗುವ ದುಗುಲಮನುಡುತುಂ ।
ನೆಱೆನೆಯ್ಯಂ ಪಾಲನುಣುತೆ ಬಾಳ್ವರೊಳಧಮರ್ ॥
ತುಱುಗಿದ ಕಱುಂಬಿನಿಂದಂ ।
ಪೊಱಿಸಲ್ ಪಾರ್ದಿರ್ಪರಕ್ಕಟಿಲ್ಲದ ದೂಱಿಂ ॥379॥

ಎಡರೊಂದೆತ್ತಾನುಂ ಬಂ ।
ದಡಸಲೊಡಂ ಪಿರಿದುಮುಲ್ಪರೆರ್ದೆಗಿಡುತುಂ ತ ।
ನ್ನೊಡಲಂ ಮಾಱಲ್ಕಲ್ಲದೆ ।
ಪೊಡವಿಯೊಳಿನ್ನಾವ ಕಜ್ಜಮೆಸಗಲ್ ತಕ್ಕರ್ ॥380॥

---

**ದ್ವಿತೀಯಭಾಗಂ ಸಂಪೂರ್ಣಂ.**



ತಿರುವಳ್ಳುವಕವಿ ನೀತಿಯ ।
ತಿರುಳಂ ಕುಱಳಂ ನೆಗಟ್ಟಿ ತಮಿೞೊಳ್ ಜಸಮಂ ॥
ಪರೆಯಿಸಿದಂ ದೆಸೆಗೆಲ್ಲಂ ।
ದೊರೆಯಾರೀ ಕವಿಗೆ ಧರೆಯೊಳೆಂಬಿನಮುಱಿದರ್ ॥

ಆತನ ಜಗತೀವಲಯ ।
ಖ್ಯಾತನ ಕೃತಿರತ್ನಖನಿಯೊಳಾಯ್ದಂ ಕೆಲವಂ ॥
ಕೌತುಕದಿಂ ರತ್ನಂಗಳ ।
ನೋತಿವನನುಗೊಳಿಕೆ ಕರ್ಣದೊಳ್ ಕನ್ನಡಿಗರ್ ॥

ನರಸಿಂಹಂ ಶೇಷಕುಲಾಂ ।
ಬರರವಿ ನಾರಾಯಣಾರ್ಯದೇಶಿಕತನುಜಂ ॥
ವಿರಚಿಸಿದನಿದಂ ಯತಿಶೇ ।
ಖರಪಾದಾಂಬುಜಮರಂದಮಾದ್ಯದ್ಭೃಂಗಂ ॥



# ಟಿಪ್ಪಣಿ.

## ಮಂಗಳ ಶ್ಲೋಕಗಳು.

ಶ್ರೀಕಾಂತಂ=ಲಕ್ಷ್ಮೀಪತಿ, ವಿಷ್ಣು. ತಟಿನೀಕಾಂತಂ=ನದಿಗಳಿಗೆ ಒಡೆಯ, ಸಮುದ್ರ. ಕರುಣಾ....ಕಾಂತಂ=ದಯಾಸಮುದ್ರ. ವಾಕ್=ಸರಸ್ವತಿ. ದೇವಿ=ಪಾರ್ವತಿ. ಪಾದ........ಕಾಂತಂ=ಬ್ರಹ್ಮರುದ್ರರಿಂದ ನಮಸ್ಕರಿಸಲ್ಪಟ್ಟ ಚರಣಕಮಲವುಳ್ಳವನು. ಪಾಲಿಕೆ=ರಕ್ಷಿಸಲಿ.

ಪಿರಿದುಂ=ವಿಶೇಷವಾಗಿ. ಸಂಸೃತಿಚಕ್ರದೆ=ಸಂಸಾರವೆಂಬ ಚಕ್ರದಲ್ಲಿ. ನರಲ್ವ=ನರಳುವ, ದುಃಖಿಸುವ. ಈಂಟಿ=ಕುಡಿದು. ನಿಃಶ್ರೇಯಸಮುಂ=ಮೋಕ್ಷಸುಖವನ್ನು. ತಿರುವಾಯ್ಮೊಟಿ=ನಮ್ಮಾಳ್ವಾರೆಂಬ ಶ್ರೀವೈಷ್ಣವಭಕ್ತರಿಂದ ರಚಿಸಲ್ಪಟ್ಟ ಭಗವದ್ಭಕ್ತಿಬೋಧಕವಾದ ಸಾವಿರ ಪದ್ಯಗಳುಳ್ಳ ತಮಿಳು ಗ್ರಂಥ. ಇದು ಸಾಮವೇದ ಸಾರವೆಂದು ಶ್ರೀ ವೈಷ್ಣವರು ಹೇಳುವರು. ಅಮುರ್ದು=ಅಮೃತ. ತಿರೆ=ಭೂಮಿ: ಸಂಸ್ಕೃತ—ಸ್ಥಿರಾ. ಮಾಱನ=ನಮ್ಮಾಳ್ವಾರೆಂಬ ಭಕ್ತರ. ಎಱಗಿದಪೆಂ=ನಮಸ್ಕರಿಸುವೆನು.

---

1. ನೆಗಪ್ತೆ ವಡೆದ=ಪ್ರಸಿದ್ಧವಾದ. ಎಂತುಟು=ಹೇಗೆ. ಅಕಾರಂ ಆದಿ=ಎಂದನ್ವಯವು. ನಿರುಪಮ........ಕರಂ=ಎಣೆಯಿಲ್ಲದ ಶುಭಗುಣಗಳಿಗೆ ನೆಲೆ. ಅಕ್ಷರಂ=ನಾಶರಹಿತನಾದ ದೇವರು. ಅಂತುಟು=ಹಾಗೆ

2. ಅಲಸದೆ=ಬೇಸರಪಡದೆ. ಕಲೆ=ವಿದ್ಯೆ. ಗಳ=ಗಡ. ನಿರ್ಮಲ ...ನ=ಶುದ್ಧಜ್ಞಾನಸ್ವರೂಪನಾದ ದೇವರ. ಎಱಗದೊಡೆ ಕಲೆಯಂ ಕಲ್ತುದಱಿಂ ಆದ ಫಲಮೇಂ ಗಳ—ಎಂದನ್ವಯವು

3. ಲೆಂಕರ=ಸೇವಕರ, ಭಕ್ತರ. ಬಗೆದಾವರೆ=ಹೃದಯ ಕಮಲ. ಬಿಂಕದೆ=ಅಭಿಮಾನದೊಡದೆ. ಕೊಂಕದೆ=ವಕ್ರಭಾವ ವಿಲ್ಲದೆ, ಕಪಟವಿಲ್ಲದೆ. ಜಾನಿಪ=ಧ್ಯಾನಿಸುವ. ಸಂಕೆ = ಶಂಕಾ (ಸಂ). ಇನಿತ್ತು=ಸ್ವಲ್ಪವೂ. ಎಯ್ದುಗುಂ=ಪಡೆವನು.

4. ರಾಗದ್ವೇಷಂಗಳ್ = ಒಲವುಮುಳಿಸುಗಳು, ಕೆಳೆಪಗೆ ಗಳು. ಆಗಳುಂ=ಯಾವಾಗಲೂ. ತಾಗದು = ಹಿಂಸಿಸುವುದಿಲ್ಲ. ತಾಪ....ವ್ರಾತಂ = ತಾಪತ್ರಯದಿಂದ ಉಂಟಾಗುವ ದುಃಖಗಳ ಸಮೂಹವು. ತಾಪತ್ರಯ—(1) ಆಧ್ಯಾತ್ಮಿಕ. (2) ಆಧಿಭೌತಿಕ (3) ಆಧಿದೈವಿಕ.

5. ಜಗತೀಜಾತ = ಲೋಕಸಮೂಹ. ನೆಗಟ್ತೆ=ಚರಿತ, ಕೀರ್ತಿ. ಪುಗುತರಲ್=ಪ್ರವೇಶಿಸಲು. ಅಣ್ಮವು=ಆರವು, ಸಮ ರ್ಥವಾಗುವುದಿಲ್ಲ. ಅವಿದ್ಯೆ=ಅಜ್ಞಾನ. ಒಗೆತರ್ಪ = ಹುಟ್ಟುವ. ನಿಸದಂ=ನಿಶ್ಚಯ. ಸುಕೃತದುಷ್ಕೃತಂಗಳ್ ಎಡೆಯಂ ಪುಗುತರಲ್ ಅಣ್ಮವು—ಎಂದನ್ವಯವು.

6. ಒಗೆವ=ಹುಟ್ಟುವ. ಒಕ್ಕಲಿಕ್ಕಿದ=ನಾಶಮಾಡಿದ, ಅಡ ಗಿಸಿದ. ಅಮಲಂ=ಪರಿಶುದ್ಧನಾದ ದೇವರು. ನಿಯಮಂಗೆಯ್ದ= ನೇಮಿಸಿದ. ಋಜುಮಾರ್ಗ=ಸನ್ಮಾರ್ಗ. ಜನನ=ಜನ್ಮ. ಜನ ನಮಂ ಉಟಿದ—ಎಂದನ್ವಯವು.

7. ಉಪಮೆಯಿಲ್ಲದನ=ಎಣೆಯಿಲ್ಲದ ದೇವರ. ಪದ........
.....ಗ್ಗೆ = ಎರಡು ಪಾದಕಮಲಗಳ ಮಕರಂದವನ್ನು ಪಾನಮಾಡಿ ಮುದಿಸಿದವರಿಗೆ. ಅನಘರ್=ಪರಿಶುದ್ಧಾತ್ಮರು. ಜನಿಯಿಪ=ಹುಟ್ಟುವ. ಕೋಟಲೆಯಂ=ತಾಪವನ್ನು, ಸಂಕಟವನ್ನು. ಅಸದಳಂ= ಅಸಾಧ್ಯವು.

8. ಅಱಿಗಡಲ್=ಧರ್ಮಸಾಗರ. ಮಿಱುಪ=ಪ್ರಕಾಶಿಸುವ. ಪಾಱಂ=ಹಡಗನ್ನು. ಕಟ್ಟೆಟ್ಕಿಱಿಂ=ಪರಮಾದರದಿಂದ, ವಿಶೇಷ ಭಕ್ತಿಯಿಂದ. ಕಡು+ಅಟ್ಮೆಱು. ಪೆಱಿಗಡಲಂ=ಇತರ ಸಮುದ್ರವನ್ನು, ಎಂದರೆ ಅರ್ಥ ಕಾಮ ಎಂಬ ಸಮುದ್ರಗಳನ್ನು. ಅರಿದು = ಅಸಾಧ್ಯವು, ಕಷ್ಟವು. ಏಗೆಯ್ದುಂ=ಏನುಮಾಡಿಯೂ, ಯಾವ ವಿಧದಲ್ಲಿಯೂ.

9. ಬಳಸಿಪ್ಪ=ಸುತ್ತಲೂ ಇರುವ. ಎಂತುಂ=ಹೇಗೂ. ಅಷ್ಟಗುಣ—(1) ಸ್ವತಂತ್ರತೆ (2) ಅಪ್ರಾಕೃತ ದೇಹವನ್ನು ಪಡೆದಿರುವಿಕೆ (3) ಸ್ವಾಭಾವಿಕಜ್ಞಾನ (4) ಸರ್ವಜ್ಞತ್ವ (5) ಪಾಪರಹಿತತ್ವ (6) ಪೂರ್ಣಕೃಪೆ (7) ಅನಂತಶಕ್ತಿ (8) ನಿರತಿಶಯಾನಂದ. ತಲೆಗಳ್ ನಿಷ್ಫಳಮಕ್ಕುಂ—ಎಂದನ್ವಯವು.

10. ತೊಟ್ಟನೆ=ಬೇಗನೆ. ದಾಂಟಿದಪರ್ = ದಾಟುತ್ತಾರೆ. ಜನಿ= ಹುಟ್ಟು, ಜನ್ಮ.

11. ಪಡೆಗುಂ = ಉಂಟುಮಾಡುವುದು, ಕೊಡುವುದು. ಮುಕ್ತಿಶ್ರೀಯಂ=ಮೋಕ್ಷಲಕ್ಷ್ಮಿಯನ್ನು. ಸಂಪತ್ತಿ=ಅತಿಶಯ, ಆಧಿಕ್ಯ. ಪೊಡವಿ =ಪೃಥಿವೀ (ಸಂ). ಅಗಳಂ=ಹೆಚ್ಚು. ಸುಖಕೆ ಧರ್ಮದಿಂದೆ ಅಗ್ಗಳಮೆನಿಪ್ಪ ಸಾಧನಮುಂಟೇ—ಎಂದನ್ವಯವು

12. ಅಜಿನಂ= ಧರ್ಮವನ್ನು. ಪೆಱತು =ಮತ್ತೊಂದು. ಮಾನಸಂಗೆ= ಮನುಷ್ಯನಿಗೆ. ದುಃಖ........ನಂ= ದುಃಖಗಳ ಸಮೂಹಕ್ಕೆ ತವರುಮನೆ,

13. ಅಸು= ಪ್ರಾಣವು. ತಡೆಯದೆ= ಸಾವಕಾಶಮಾಡದೆ. ನಿಷ್ಕಪಟ....ದೆ= ನಿರ್ವಂಚನೆಯಿಂದ. ಆರ್ಪನಿತಂ= ಸಾಧ್ಯವಾದಷ್ಟನ್ನು. ಎಸಕದೊಳ್= ಕೆಲಸದಲ್ಲಿ. ಎಲ್ಲಂದದಿಂದಂ = ಎಲ್ಲಾ ರೀತಿಯಲ್ಲಿಯೂ. ಎಸಗುವುದು= ಮಾಡಬೇಕು. ಆರ್ಪನಿತಂ ಅಜಿನಂ ಎಸಗುವುದು—ಎಂದನ್ವಯವು.

14. ಇನಿಸುಂ= ಸ್ವಲ್ಪವೂ. ಅಪ್ಪುದು = (ನೀನು) ಆಗಬೇಕು. ಅನಿತೆ= ಅಷ್ಟೇ. ಅಜಿನೆಂಬುದು ಅನಿತೆ--ಎಂದನ್ವಯವು. ಮತ್ತಿನ= ಇತರವಾದ. ನೋಟ್ಪಿನಂ = ಆಲೋಚಿಸಿ ನೋಡಲು. ಆಡಂಬರಮೆ = ಜಂಬವೇ.

15. ಉನ್ನತಿ = ಏಳಿಗೆ, ಅಸೂಯಾಭರಂ = ಹೆಚ್ಚಾದ ಹೊಟ್ಟೆಕಿಚ್ಚು. ಪುರುಳೊಳ್ =ದ್ರವ್ಯದಲ್ಲಿ. ಮಾಮುಸಕಂ= ಹೆಚ್ಚಾದ ಕೋಪವು. ವೃತ್ತದಿಂ = ನಡತೆಯಿಂದ. ನೆಗಟ್ಬುದು= ವರ್ತಿಸುವುದು.

16. ಎಳೆಯರ್ಗೆ= ಚಿಕ್ಕವಯಸ್ಸಿನವರಿಗೆ. ವಿಸ್ತರದೆ= ವಿಶೇಷವಾಗಿ. ಕೆಟವರಾದಂದು = ವೃದ್ಧರಾದಾಗ. ತಿಳಿವಂ= ತಿಳಿದುಕೊಳ್ಳುವ. ಎಸಗು= ಮಾಡು. ಪೊಂದುವಂದು= ಸಾವಾಗ. ಪೊಂದದ = ನಾಶವಾಗದ, ಶಾಶ್ವತವಾದ.

17. ತಿಳಿವೊಡೆ= ತಿಳಿಯಬೇಕಾದರೆ. ನೋಡವೇಡಿದುದು= ನೋಡಬೇಕಾದುದು. ಅಂದಳಮುಂ =ಪಾಲಕಿಯನ್ನು. ಸಮಂತು =ಚೆನ್ನಾಗಿ, ಸ್ಪಷ್ಟವಾಗಿ. ಬರ್ಕುಂ =ಬರುತ್ತದೆ.

18. ಶೂನ್ಯವಾಗದಂತು =ವ್ಯರ್ಥವಾಗದಹಾಗೆ. ಒಡರಿಸಗೆ= ಮಾಡಲಿ. ಜನ್ಮಾಂತರಕೆ= ಇನ್ನೊಂದು ಜನ್ಮಕ್ಕೆ. ಕರ್ಗಲ್—ಕರಿದು+ಕಲ್.

19. ಬಗೆವೊಡೆ=ಆಲೋಚಿಸಿದರೆ. ಸಮನಿಪ=ಪ್ರಾಪ್ತವಾಗುವ. ಸೊಗಂ=ಸುಖಂ (ಸಂ). ಅಲ್ತು= ಅಲ್ಲ. ಅಗೆ= ಸಸಿ. ಬಿಟ್ತು=ಬೀಜ.

20. ಅನುದಿನಂ=ಪ್ರತಿದಿನವೂ. ಆಚರಿಸವೇಡಿದುದು= ಮಾಡಬೇಕಾದುದು. ನಂಜಿನವೋಲ್= ವಿಷದಹಾಗೆ. ತ್ಯಜಿಸಲ್ವೇಡಿದುದು=ಬಿಡಬೇಕಾದುದು. ದ್ವೇಷದಿಂದೆ ತ್ಯಜಿಸಲ್ವೇಡಿದುದು— ಎಂದನ್ವಯವು. ದಿಟದಿಂ= ನಿಶ್ಚಯವಾಗಿ.

21. ಮನೆವಾಳ್ಕೆಗೆ = ಗೃಹಕೃತ್ಯಕ್ಕೆ. ಮನಂಗೊಳಿಸುತ್ತುಂ=ಮನಸ್ಸನ್ನು ರಂಜಿಸುತ್ತ. ಮನದನ್ನನ=ಗಂಡನ. ಆಯಕೆ= ಹುಟ್ಟುವಳಿಗೆ, ವರಮಾನಕ್ಕೆ. ಬೀಯ= ವ್ಯಯ (ಸಂ). ಎಸಪ =ಮಾಡುವ. ಸಹಧರ್ಮಿಣಿ=ಹೆಂಡತಿ.

22. ಗೃಹಿಣಿ=ಹೆಂಡತಿ. ಗೃಹಾಶ್ರಮಕ್ಕೆ=ಗೃಹಸ್ಥಾಶ್ರಮಕ್ಕೆ. ಬಱುವನೆ= ಏನೂ ಇಲ್ಲದ ಮನೆ. ಬಱಿದು+ಮನೆ.

23. ಸಲ್ಲಲಿತ........ಡೆ=ಒಳ್ಳೆಯ ಗುಣಗಳನ್ನು ಭೂಷಣವಾಗಿ ಉಳ್ಳವಳಾದರೆ. ನಲ್ಲಳ್ =ಹೆಂಡತಿ. ಪೊಲ್ಲಳ್ =ಕೆಟ್ಟವಳು ಉಳ್ಳುದು= ಇರುವುದು.

24. ವಿಭೂತಿ =ಐಶ್ವರ್ಯವು. ಕಳತ್ರರತ್ನದಿಂ=ಹೆಂಡತಿಯೆಂಬ ರತ್ನಕ್ಕಿಂತ. ಅದಱೊಳ್= ಆ ರತ್ನದಲ್ಲಿ. ಉದ್ದ್ಯೋ

ತಕಗುಣಂ= ಕಾಂತಿಯನ್ನು ಹೆಚ್ಚಿಸುವ ಗುಣವು. ನೆಲಸುವೊಡೆ= ನಿಲ್ಲುವುದಾದರೆ.

25. ಇನನೇ=ಗಂಡನೇ. ವಿನಮಿಸುತುಂ = ನಮಸ್ಕರಿಸುತ್ತ. ಇತರದೈವಂ ನೆನೆಯದ= ಬೇರೆ ದೇವತೆಯನ್ನು ಸ್ಮರಿಸದ—ಕ್ರಿಯಾಸಮಾಸವು. ಪೊಯ್ಯವೇಡೆ= ಹೊಯ್ ಎಂದು ಹೇಳಲು.

26. ಓವುತೆ= ಕಾಪಾಡುತ್ತ. ಆವಗಂ = ಯಾವಾಗಲೂ. ಜಸ = ಯಶಸ್ಸು (ಸಂ). ಪಾವನ........ತೆ= ಪರಿಶುದ್ಧವಾದ ಗುಣಗಳೂ ನಡತೆಯೂ ಉಳ್ಳವಳು.

27. ಅಗುಳಿ = ತಾಳು, ಅಗಣಿ. ಮದಿಲ್ =ಗೋಡೆ, ಪ್ರಾಕಾರ. ಬಿಯ್ಯಗಂ= ಬೀಗವು. ಇವಱಿಂದೆ= ಇವುಗಳಿಂದ. ಕಾಪು= ಕಾವಲು. ಏವುದೊ= ಏನು ಕೆಲಸಕ್ಕೆ ಬಂದೀತೋ. ನೆಟ್ಟಗೆ= ಸರಿಯಾಗಿ. ನಲ್ಗಾಪು= ಒಳ್ಳೆಯ ಕಾವಲು.

28. ಜೀವಿತೇಶನಂ = ಪ್ರಾಣಕ್ಕೆ ಒಡೆಯನನ್ನು, ಗಂಡನನ್ನು. ಅನವರತಂ =ಯಾವಾಗಲೂ. ವಿನಯಾ....ಗಿ =ವಿನಯದೊಡನೆ ನಮಸ್ಕರಿಸಿ. ಮನ್ನಿಪರ್ = ಮರ್ಯಾದೆಮಾಡುವರು. ಅಮರರ್ = ದೇವತೆಗಳು.

29. ಮಸುಳದ =ಮಲಿನವಾಗದ. ಎಳಸುವ =ಅಪೇಕ್ಷಿಸುವ. ಪಿಸುಣಾಡುವರ = ಪಿಶುನರ, ದುರ್ಜನರ. ಸಮನಿಸದು = ಉಂಟಾಗದು. ವಲಂ = ನಿಶ್ಚಯವು. ಸಿಂಗ = ಸಿಂಹ (ಸಂ). ಗಮನಿಪ =ಅಡಿಯಿಡುವ. ಬಿಂಕಂ =ಹೆಮ್ಮೆ.

30. ಅನುಪಮೇಯಭೂಷಣಂ = ಎಣೆಯಿಲ್ಲದ ಆಭರಣವು.

31 ಇಳೆಯೊಳ್ = ಭೂಮಿಯಲ್ಲಿ. ಒಳವು = ಇರುವುವು. ಅವಱೊಳ್ = ಅವುಗಳಲ್ಲಿ.

32. ಪಕ್ಕಾಗದ = ಆಸ್ಪದವಾಗದ, ಎಡೆಯಾಗದ. ಬೃಂದ= ಸಮೂಹ. ಬೀಡು= ನೆಲೆ, ಸ್ಥಾನ. ದೂಸಱಿಂ = ದೆಸೆಯಿಂದ, ಕಾರಣದಿಂದ. ಒಂದುವ= ಪಡೆವ. ಅಟಲ್= ದುಃಖವು. ಅಟಲ್ ಎಯ್ದಿದು—ಎಂದನ್ವಯವು.

33. ತನುಜರ = ಮಕ್ಕಳ. ಸದ್ವೃತ್ತದೆ= ಒಳ್ಳೆಯ ನಡತೆಯಿಂದ. ಸಮ್ಮನಿಪುದಱಿಂ = ಉಂಟಾಗುವುದರಿಂದ ತಂದೆವಿರ್— ವಿರ್ ಬಹುವಚನ ಪ್ರತ್ಯಯವು.

34. ಕೆಂದಳಿರಂದದ=ಕೆಂದಳಿರಂತಿರುವ. ಕೆಚ್ಚನೆ + ತಳಿರ್. ಸುಟ್ಟಿ= ನಿರ್ದೇಶವಮಾಡಿ. ಮನಂದಂದು= ಆಸೆಯಿಂದ. ಕಿಸುಟ್ಟಿದ = ಕಿವುಚಿದ. ಬೋನಂ= ಅನ್ನವು. ಸುಧೆಯತ್ತಣಿಂದಂ = ಅಮೃತಕ್ಕಿಂತ. ಇನಿದು = ಮಧುರ.

35. ತಳ್ಕೈಸುವುದೇ = ಆಲಿಂಗನ ಮಾಡಿಕೊಳ್ಳುವುದೇ. ಮೇಣ್ = ಮತ್ತೂ. ಬಾಸೆ = ಭಾಷಾ (ಸಂ). ಆಲಿಪುದೆ= ಕೇಳುವುದೆ.

36. ಬೀಣೆ = (ಸವೀಣಾ). ವೇಣುವ = ಕೊಳಲಿನ. ನಿನಾದಂ= ಧ್ವನಿ. ಎಂಬರ್ = ಎಂಬವರು. ವಿಗತೋಪಧಿಯಂ = ಅವ್ಯಾಜವಾದ, ನೆಪವಿಲ್ಲದ. ಕೇಳದರಕ್ಕಂ= ಕೇಳದೆ ಇರುವವರಾಗಿರಬೇಕು. ತಳ್ಪೊಯ್ವ = ತಿರಸ್ಕರಿಸುವ. ಕಲಭಾಷಿತಮಂ=

ಮಧುರವಾದ ನುಡಿಯನ್ನು. ಎಂಬರ್ ವಿಗತೋಪಧಿಯಂ........ಕಲ ಭಾಷಿತಮಂ ಕೇಳದರಕ್ಕಂ—ಎಂದನ್ವಯವು.

37. ವಿತತ........ನಂ= ಅನೇಕ ಶಾಸ್ತ್ರಗಳಲ್ಲಿ ಪಂಡಿತನ ನ್ನಾಗಿ. ಧೃತಿ=ಧೈರ್ಯ. ದಲ್=ನಿಜವಾಗಿಯೂ. ಎಸಗವೇಡಿದ= ಮಾಡಬೇಕಾದ.

38. ವಿದ್ಯಾಪರಿಣತಂ=ವಿದ್ವಾಂಸನು. ಸಂತಸ=ಸಂತೋಷ (ಸಂ). ವಿದ್ಯಾವಿನೋದಿಗಳ್ಗೆ =ಪಂಡಿತರಿಗೆ.

39. ಜನಿಯಿಸಿದಾಗಳ್=ಹುಟ್ಟಿದಾಗ, ಅಗ್ಗಳಂ= ಹೆಚ್ಚು. ಕಲಾವಿಶಾರದ= ವಿದ್ವಾಂಸನು.

40 ಶ್ರುತಮಂ= ವಿದ್ಯೆಯನ್ನು. ಚರಿತ್ರಮಂ=ನಡತೆಯನ್ನು. ನೋಂತನೊ= ತಪಸ್ಸುಮಾಡಿದನೋ. ಎಂಬತೆಱದೆ= ಎಂದು ಹೇಳುವ ರೀತಿಯಲ್ಲಿ. ನೆಗಳ್ವುದೆ= ವರ್ತಿಸುವುದೇ. ಎಸಪ= ಮಾಡುವ,

41. ಅದವಟಿಲಂ=ದುಃಖವನ್ನು, ಸಂತಾಪವನ್ನು. ಅಯತ್ನದಿಂ=ತನ್ನಷ್ಟಕ್ಕೆ ತಾನೇ. ಕೂರ್ಮೆಯಂ= ಪ್ರೀತಿಯನ್ನು. ಇರದೆ=ಕೂಡಲೆ ಸಾಱುಗುಂ= ಪ್ರಕಟಿಸುವುದು. ಕೂರ್ಮೆಯುಮಂ= ಪ್ರೀತಿಯನ್ನೂ ಕೂಡ. ಸೆಱೆಗೆಯ್ದು =ಕಟ್ಟುಮಾಡಿ. ಅರ್ಗಳಂ=ತಾಳು, ಅಗುಳಿ, ಅಗಣಿ (27ನೆಯ ಪದ್ಯವನ್ನು ನೋಡಿ).

42. ಹೇಮ=ಹೊನ್ನು. ಪ್ರೇಮಾ....ಯರ್ =ಪ್ರೀತಿರಸದಿಂದ ತುಂಬಿದ ಹೃದಯವುಳ್ಳವರು. ಉದ್ದಾಮ = ಶ್ಲಾಘ್ಯವಾದ.

43. ಅರಿದು = ಕಷ್ಟವು. ಅಭವದೊಳ್ = ಹಿಂದಣ ಜನ್ಮದಲ್ಲಿ. ಬಿತ್ತರಿಸಿದ = ವಿಸ್ತರಿಸಿದ (ಸಂ), ವಿಶೇಷವಾಗಿ ತೋಱಿಸಿದ. ಓಸರಿಸದೆ = ತಪ್ಪದೆ.

44. ಒದವಿದ = ಹೆಚ್ಚಿದ. ಉದಯಿಕುಂ = ಹುಟ್ಟುವುದು. ಒಲವು = ಪ್ರೀತಿ. ಎರವಿಲ್ಲದ = ಭೇದವಿಲ್ಲದ. ಸಾರ್ವಜನೀನಮಿತ್ರಂ = ಸಮಸ್ತಜನರಿಗೂ ಸ್ನೇಹಿತನು. ಉರು = ವಿಶೇಷವಾದ, ಅತಿಶಯವಾದ.

45. ಪರತ್ರೆಯೊಳ್ = ಪರಲೋಕದಲ್ಲಿ. ಅಳವಟ್ಟ = ಹೊಂದಿಕೆಯಾದ. ಆಚರಣದ = ನಡತೆಯ. ಅತುಳ = ಎಣೆಯಿಲ್ಲದ. ಉಸಿರ್ವರ್ = (ದೊಡ್ಡವರು) ಹೇಳುವರು.

46 ಪೊಲ್ಲಮೆಯುಂ = ಕೇಡನ್ನು. ವಿರಚಿಸಿದರೊಳಂ = ಮಾಡಿದವರಲ್ಲಿಯೂ. ಬಗೆಯೊಳ್ = ಮನಸ್ಸಿನಲ್ಲಿ.

47. ಪುೞು = ಹುಳು. ಬಂಬಲಬಾಡುವತೆಱದೆ = ಬಹಳವಾಗಿ ಬಾಡುವಹಾಗೆ. ಚುರ್ಚುರ್ವವೋಲ್ = ಸುಡುವಹಾಗೆ. ಮಮ್ಮಲ ಮಱುಗುವತೆಱದೆ = ಬಹಳವಾಗಿ ತಪಿಸುವಹಾಗೆ. ರವಿತನಯಂ = ಸೂರ್ಯಪುತ್ರನಾದ ಯಮನು.

48. ಮೇದಿನಿಯೊಳ್ = ನೆಲದಲ್ಲಿ. ತಳಿರ್ದೊಂಗಲ್ = ತಳಿರಿನ ಗೊಂಚಲು. ಒಗೆವೊಡೆ = ಹುಟ್ಟುವುದಾದರೆ. ಮನೆವಾೞ್ಕೆ = ಸಂಸಾರ.

49. ಆಲೀನ.......ಲಂ = ವ್ಯಾಪ್ತವಾದ ಪ್ರೀತಿರಸಕ್ಕೆ ಪಾತ್ರೆ. ಇರ್ಕೆ = ಸ್ಥಾನ, ನೆಲೆ. ತದನ್ಯಂ = ಉಳಿದುದು—ಎಂದರೆ ಪ್ರೀತಿರಸಕ್ಕೆ ಪಾತ್ರೆಯೆನಿಸದ ಒಡಲು. ತೋಲಂ = ಚ

ರ್ಮವನ್ನು. ಬಾಸಣಿಸಿದ = ಹೊದಿಸಿದ. ಕಂಕಾಲಮೆ ದಲ್ = ಅಸ್ಥಿಪಂಜರವೇ ಸರಿ, ಎಲುವಿನ ಗೂಡೇ ಸರಿ.

50. ಅವಿಕಲಮಾಗಿರೆಯುಂ = ಊನವಿಲ್ಲದಿದ್ದರೂ. ಅಮಿತ.........ರ್ಷಂ = ಅಳವಿಲ್ಲದ ಐಶ್ವರ್ಯದಿಂದಾದ ಉನ್ನತಿ. ಸಮನಿಸೆಯುಂ = ಉಂಟಾದರೂ. ಸಮನಿಸು : ಸಮ್ಮನಿಸು ಎಂದೂ ಉಂಟು.

51. ತಪಂಬಡಲ್ = ತಪಸ್ಸುಮಾಡಲು. ಗೃಹಮೇಧಿ = ಗೃಹಸ್ಥನು. ಅನುವಿಂ = ಉಚಿತಕ್ರಮದಲ್ಲಿ. ಧನಮರ್ಜಿಸಿ = ಧನವನ್ನು ಸಂಪಾದಿಸಿ—ಕ್ರಿಯಾಸಮಾಸವು. ಬಿರ್ದಿನರಂ = ಅತಿಥಿಗಳನ್ನು.

52. ಅಭ್ಯಾಗತರಂ = ಅತಿಥಿಗಳನ್ನು. ಸಡ್ಡೆಗೆಯ್ಯದೆ = ಲಕ್ಷ್ಯಮಾಡದೆ. ಸಡ್ಡೆ = ಶ್ರದ್ಧಾ (ಸಂ). ಓಗರಂ = ಅನ್ನವು. ಏಗಂ = ನಿಜವಾಗಿಯೂ. ಸ್ಪೃಹಣೀಯಮಲ್ತು = ಆಸೆಪಡತಕ್ಕದಲ್ಲ.

53. ನಿಚ್ಚಂ = ನಿತ್ಯವೂ—ನಿತ್ಯಂ (ಸಂ). ಮಾನೋ........ನ = ಹೆಚ್ಚಾದ ಪೂಜ್ಯತೆಯನ್ನು ಹೊಂದಿದವನ. ಸಮುನ್ನತಿ = ಏಳಿಗೆ. ಎಡರಂ = ದಾರಿದ್ರ್ಯವನ್ನು, ಸಂಕಟವನ್ನು.

54. ಹರಿಸದೆ = ಸಂತೋಷದಿಂದ—ಹರ್ಷ (ಸಂ). ಮೊಗಮಲರ್ದು = ಮುಖವಿಕಾಸವನ್ನು ಹೊಂದಿ. ಗುಣಾಕರರ್ = ಸದ್ಗುಣಗಳಿಗೆ ನೆಲೆಯಾದವರು. ಮಹಾಂತರ = ಮಹಾತ್ಮರ. ಕರುಣಾಕೇಕರಮಂ = ಕೃಪಾಕಟಾಕ್ಷವನ್ನು. ಬೀಱುತ್ತೆ = ಪಸರಿಸುತ್ತ. ಕಮಲೆ = ಲಕ್ಷ್ಮೀ.

55. ಆಗಂತುಗಳಂ = ಅತಿಥಿಗಳನ್ನು. ತಣಿವನ್ನೆಗಂ = ತೃಪ್ತರಾಗುವಹಾಗೆ. ಬಿತ್ತಾದೆ = ಬೀಜಹಾಕದೆಯೇ.

56. ಪಾರ್ದು = ನಿರೀಕ್ಷಿಸಿಕೊಂಡು. ಮಱುವೆಯೊಳ್ = ಮುಂದಣ ಜನ್ಮದಲ್ಲಿ. ಬೃಂದಾ...........ಕೆ = ದೇವತೆಗಳ ಸಮೂಹಕ್ಕೆ. ಅಭಿಮತ = ಇಷ್ಟನಾದ.

57. ಅತಿಥಿಕ್ರಿಯೆ = ಅತಿಥಿಸತ್ಕಾರ. ಕ್ರತು = ಯಾಗ. ಪರಿಮಿತಿ = ಅಳತೆ. ತಕ್ಕುಮೆಯು = ಯೋಗ್ಯತೆಯು. ನೋಟ್ಪಿನ್ನಂ = ಆಲೋಚಿಸಿ ನೋಡಲು.

58. ಪುರುಳಿಂದೆ = ದ್ರವ್ಯದಿಂದ. ಉರು = ಶ್ರೇಷ್ಠವಾದ. ಉಮ್ಮಳಿಪರ್ = ತಪಿಸುವರು.

59. ತೆಗಟ್ವೆ = ನಿಂದಿಸುವ, ತಿರಸ್ಕರಿಸುವ, ಬೆಳ್ತನಂ = ಅವಿವೇಕ, ಮೌಢ್ಯ. ತೋರ್ಕೆನಡೆಗುಂ = ಪ್ರಕಟವಾಗುವುದು.

60. ಕಂದುವುದು = ಬಾಡುವುದು. ಆಘ್ರಾಣಿಸಲೊಡಂ = ಮೂಸಲು. ಅಂದಂಬೆತ್ತು = ಸುಂದರವಾಗಿ. ಮಲರ್ ಪುಷ್ಪವು.

61. ಪ್ರೇಮಾರ್ದ್ರವಾಗಿ = ಪ್ರೀತಿರಸದಿಂದ ಕೂಡಿದುದಾಗಿ. ವಾಮತೆ = ವಕ್ರತೆ. ಸದ್ಗುಣ........ರ = ಸದ್ಗುಣಗಳೆಂಬ ಮುತ್ತುಗಳನ್ನು ಹಾರವಾಗಿ ಉಳ್ಳ. ತಾಮರಸ = ಕಮಲ, ಇನಿನುಡಿ = ಮಧುರವಾಕ್ಕು—ಇನಿದು + ನುಡಿ.

62. ನೀಡುಂ = ವಿಶೇಷವಾಗಿ. ಮನಮಲರ್ದು = ಹೃದಯ ವಿಕಾಸವನ್ನು ಹೊಂದಿ. ತಳ್ವದೆ = ಸಾವಕಾಶಮಾಡದೆ. ಸವಿಮಾತು = ಮಧುರವಾಕ್ಕು.

63. ನೀರೇರುಹಂ= ಕಮಲ. ನೇಹ= ಪ್ರೀತಿ—ಸ್ನೇಹ (ಸಂ). ಸಾರೆವರೆ= ಸಮೀಪಕ್ಕೆ ಬರಲು. ಓರಂತೆ = ಹೊಂದಿಕೆಯಾಗಿ. ಎರ್ದೆಮುಟ್ಟೆ = ಮನಃಪೂರ್ವಕವಾಗಿ. ಅಱಕೆ = ಧರ್ಮಕ್ಕೆ.

64. ನಲವಿಂದಂ= ಪ್ರೀತಿಯಿಂದ, ಸಂತೋಷದಿಂದ. ದುಗುಡಮಂ= ದುಃಖವನ್ನು.

65. ಶಾಲೀನತೆಯುಂ= ವಿನಯವೂ, ನಮ್ರತೆಯೂ. ಕನಕ= ಹೊನ್ನು. ಆದುವು= ಮಾಡಲ್ಪಟ್ಟುವು.

66. ಪುರುಳಿಂ= ಅರ್ಥದಿಂದ. ದೊರೆಕೊಳಿಸುವ= ಉಂಟುಮಾಡುವ. ಸೊಲ್ಲಂ= ಮಾತನ್ನು. ಎರ್ದೆಯೊಳ್ = ಮನಸ್ಸಿನಲ್ಲಿ. ಅರಯ್ದು = ಆಲೋಚಿಸಿ. ಇನಿದಾಗಿರೆ = ಮಧುರವಾಗಿರುವ ಹಾಗೆ. ಇರದೆ = ನಿಶ್ಶೇಷವಾಗಿ. ಕಿವಿಗೆ ಇನಿದಾಗಿರೆ—ಎಂದನ್ವಯವು. ದುರಿತಂ = ಪಾಪವು.

67. ಸೊಗಂಬಡೆವ= ಸುಖವನ್ನು ಹೊಂದುವ. ತೋರ್ಪ= ತೋರಿಸುವ. ಒರೆವಂಗೆ= ಹೇಳುವವನಿಗೆ. ಧೊರೆವಡೆದ = ಪ್ರಸಿದ್ಧವಾದ. ದೊರೆಕೊಳಿಕುಂ= ಉಂಟುಮಾಡುವುದು. ಇನಿವಾತು (ಕರ್ತೃ) ದೊರೆಕೊಳಿಕುಂ= ಎಂದನ್ವಯವು.

68. ಇನಿಸಾನುಂ = ಸ್ವಲ್ಪವಾದರೂ. ಮಱುಕಮಂ = ತಾಪವನ್ನು. ಕಿಱಿದುಂ= ಸ್ವಲ್ಪವೂ. ಎಡರ್ = ದುಃಖ, ದಾರಿದ್ರ್ಯ.

69. ನಿಷ್ಠುರೋಕ್ತಿಯಂ = ಕಠಿಣವಾದ ಮಾತನ್ನು

70. ಇರ್ಪಿನಂ= ಇರಲು. ಉಸಿರ್ವುದು= ಹೇಳುವುದು. ವಿಡಿಯುಂ=ಎಳೆಯ ಕಾಯನ್ನು, ಹೀಚನ್ನು.

71. ನೆರವಾಗದ = ಸಹಾಯಮಾಡದ. ಅಖಿಲಾವನಿಯುಮುಂ=ಸಮಸ್ತವಾದ ಭೂಮಿಯನ್ನೂ. ಅಮರ್ತ್ಯಲೋಕಮುಮಂ= ದೇವಲೋಕವನ್ನೂ, ಸ್ವರ್ಗವನ್ನೂ. ದೊರೆಗೆ ಬಾರವು= ಸಮಾನವಾಗವು.

72. ಎಡರಡಸಿದಾಗಳ್=ಕಷ್ಟ ಬಂದಾಗ. ಆರಯ್ವೊಡೆ=ಆಲೋಚಿಸಿದರೆ. ಕಾಲಮುಂ ಆರಯ್ವೊಡೆ—ಎಂದನ್ವಯವು. ಮೂಲ್ಯ= ಬೆಲೆ.

73. ಮುಯ್ಯ್= ಪ್ರತ್ಯುಪಕಾರವು. ತಳ್ವೊಯ್ಯದೆ=ತಿರಸ್ಕರಿಸದೇ ? ಪೆಂಪಿಂದಂ =ವಿಸ್ತಾರದಿಂದ. ರಯ್ಯಂ= ಮನೋಹರ—ರಮ್ಯ (ಸಂ). ಪೆಂಪಿಂದಂ= ಆಧಿಕ್ಯದಿಂದ. ಉಪಕಾರಂ ಪೆಂಪಿಂದಂ ರಯ್ಯಮೆನಿಪ್ಪ ಅಂಬುರಾಶಿಯುಂ ಪೆಂಪಿಂದಂ ತಳ್ವೊಯ್ಯದೆ ಪೇೞ್—ಎಂದನ್ವಯವು.

74. ಕೊಂಡುಕೊನೆವಂ = ಕೊಂಡಾಡುವನು. ಉಪಕಾರಕನಂ= ಉಪಕಾರಮಾಡಿದವನನ್ನು.

75. ಮಿತಿಯೆ= ಅಳತೆಯೆ. ಮೇರೆ= ಅವಧಿ. ಕೃಪಣರ್= ಅಲ್ಪರು, ದೀನರು. ಪಾತ್ರತೆ= ಯೋಗ್ಯತೆ

76. ಎಡರಡಸಿದಂದು= ಕಷ್ಟ ಬಂದಾಗ. ಸಡಗರದಿಂ= ತಪಕದೊಡನೆ. ಪೊರೆದವರಲ್ಲಿ =ರಕ್ಷಿಸಿದವರಲ್ಲಿ.

77. ತವಗೆ= ತಮಗೆ. ತವಿಸಿ= ಹೋಗಲಾಡಿಸಿ. ಸೌಜನ್ಯಮಂ= ಒಳ್ಳೆಯತನವನ್ನು. ಭವ= ಜನ್ಮ. ಅಲ್ಲ= ಅಲ್ಲದೆ. ಶ. ಮ. ದ. ಸೂತ್ರ 47.

78. ಅಲ್ತು = ಅಲ್ಲ. ಮಱೆವುದು ಧರ್ಮಂ ಅಲ್ತು—ಎಂದನ್ವಯವು. ಭೋಂಕನೆ= ಕೂಡಲೆ. ದಿಟದೆ= ನಿಜವಾಗಿಯೂ.

79. ಬೇವತೆಱದೆ= ತಪಿಸುವ ರೀತಿಯಲ್ಲಿ. ನಂದುಗುಂ= ಕೆಡುವುದು. ಬೇಗುದಿ= ತಾಪ.

80. ಅಟಿದೊಡಂ = ನಾಶವಮಾಡಿದರೂ. ಓವಲ್ಕೆ = ರಕ್ಷಿಸಲು, ವಿಮೋಚನವಮಾಡಲು. ಎಡೆ = ಅವಕಾಶ. ಉಪಕೃತಿಯನಟಿದ =ಕೃತಘ್ನನಾದ.

81. ಅರಿ= ಶತ್ರು. ಮೂದೆಱದ= ಮೂರುವಿಧವಾದ. ಓಸರಿಸದೆ=ತೊಲಗದೆ, ಹೊರಳದೆ. ನಡುನೆಲೆ= ಮಧ್ಯಸ್ಥಭಾವ, ಪಕ್ಷಪಾತವಿಲ್ಲದಿರುವಿಕೆ.

82. ಬೀಯದೆ= ಕುಂದದೆ. ಬೀಱಿ= ಕೊಟ್ಟು. ಆಯುಷ್ಯಾಂತಂಬರಂ= ಬದುಕಿರುವವರೆಗೂ. ಅನಪಾಯ=ಕೇಡಿಲ್ಲದ

83. ಆದೇಯಂ=ಗ್ರಾಹ್ಯ. ನ್ಯಾಯಾ........ಯಿಂ=ನ್ಯಾಯವನ್ನು ಬಿಟ್ಟ ನಡತೆಯಿಂದ. ಒಗೆವೊಡೆ=ಉಂಟಾಗುವುದಾದರೆ. ಸಂಪತ್ತಿ=ಐಶ್ವರ್ಯ. ಸಂಪತ್ತಿ ಆದೇಯಂ ಆಗದು—ಎಂದನ್ವಯವು.

84, ಇವಂದಿರ್=ಇವರುಗಳು, ದಿರ್—ಬಹುವಚನ ಪ್ರತ್ಯಯವು ನೆಟ್ಟನೆ=ಸ್ಪಷ್ಟವಾಗಿ. ಅದಱಭಾವದಿಂ=ಸುಸಂಗತಿಯ ಅಭಾವದಿಂದ.

85. ಕತದಿಂ=ಕಾರಣದಿಂದ. ಕುಂದು = ಹಾನಿ. ಪೆರ್ಚು = ವೃದ್ಧಿ. ಸಂದಿಸುಗುಂ = ಉಂಟಾಗುವುವು. ಎರ್ದೆ = ಮನಸ್ಸು, ಎದೆ. ನಡು.......ವಂ = ನಡುನೆಲೆಯೆಂಬ ಆಭರಣವನ್ನು.

86. ಸಮದರ್ಶಿತ್ವಂ = ಸಮವಾಗಿ ಕಾಣುವಿಕೆ. ಸಮೆಯಲ್ಕೆ = ಮಾಡಲು. ಬಗೆಯೆ = ಭಾವನೇ, ಯೋಚನೆಯೇ. ಅಱಿಪ = ತಿಳಿಸುವ. ಉತ್ಪಾತಂ = ಅಪಶಕುನ, ಅರಿಷ್ಟ.

87. ಅನುಕ್ರಮದಿಂ = ಹೊಂದಿಕೆಯಾಗಿ. ಸಚ್ಚಾರಿತ್ರಂಗೆ = ಒಳ್ಳೆಯ ನಡತೆಯುಳ್ಳವನಿಗೆ. ಏನಾನುಂ = ಏನಾದರೂ.

88. ಕೆಲಕೆ = ಪಾರ್ಶ್ವಕ್ಕೆ. ಒಲೆಯದೆ = ಚಲಿಸದೆ ಗುರುತೆಯಂ = ಭಾರವನ್ನು. ನ್ಯಾಯ್ಯತೆಯಂ = ನ್ಯಾಯವಾಗಿರುವಿಕೆಯನ್ನು. ತುಲೆ = ತಕ್ಕಡಿ. ಒಕ್ಕೆಲಕೆ = ಒಂದು ಪಾರ್ಶ್ವಕ್ಕೆ. ತಳೆಗೆ = ವಹಿಸಲಿ.

89. ಸೊಲ್ಲಿಪ = ಹೇಳುವ, ಆಡುವ. ಋಜುತೆ = ಸರಳತೆ. ಒಡನಾಡಿ = ಸಹಚಾರಿ.

90. ಪರದರ್ = ವರ್ತಕರು. ಪರದುಗೆಯಲ್ಕೆ = ವ್ಯಾಪಾರಮಾಡಲು. ನಲ್ಪರದು = ಒಳ್ಳೆಯ ವ್ಯಾಪಾರ.

91. ತ್ರಿದಶರ = ದೇವತೆಗಳ. ಆತ್ಮಸಂಯಮಂ =ಕೋಪಾದಿಗಳನ್ನು ಅಡಗಿಸುವಿಕೆ, ಇಂದ್ರಿಯಜಯ. ಪುದಿದ = ದಟ್ಟವಾದ. ಅಂಧತಮಸಕ್ಕೆ = ನರಕದ ಕಗ್ಗತ್ತಲೆಗೆ. ಸ್ವೈರಪ್ರವೃತ್ತಿ = ಸ್ವೇಚ್ಛಾವ್ಯಾಪಾರ. ಅಘಂ = ಪಾಪ.

92. ವಶಿತ್ವಂ = ಇಂದ್ರಿಯಜಯ. ನಿಧಿಯಾಂತಿರೆ = ನಿಧಿಯಹಾಗೆ. ಕಾಪಿಡುಗೆ = ಕಾಪಾಡಲಿ.

93. ದಮಂ = ಇಂದ್ರಿಯಜಯ. ತತಿ = ಸಮೂಹ ನಿಱಿಸಿ = ನಿಲ್ಲಿಸಿ. ನೆಗಟ್ದಂಗೆ = ವರ್ತಿಸಿದವನಿಗೆ. ಅರ್ಹಣೆಯುಂ = ಪೂಜ್ಯತೆಯನ್ನು.

94. ವಶಿ = ಇಂದ್ರಿಯಗಳನ್ನು ವಶದಲ್ಲಿಟ್ಟುಕೊಂಡಿರುವವನು. ಅಗದ = ಪರ್ವತದ.

95. ಸುಖಜನಕಂ = ಸುಖವನ್ನು ಉಂಟುಮಾಡುವುದು, ಸುಖಕ್ಕೆ ಕಾರಣವು. ನಿಸದಂ = ನಿಜವು. ಎಣಿಕುಂ = ಎಣಿಸುವರು.

96. ಆವೆ = ಆಮೆ, ಕೂರ್ಮ. ಬಸಂಗೆಯ್ದಂಗೆ = ವಶಮಾಡಿದವನಿಗೆ. ಸರಣ್ = ರಕ್ಷಕವು.

97. ಕಾಯಲ್ವೇಡಿದುದು = ಕಾಯಬೇಕಾದುದು. ಅನಿತಂ = ಅಷ್ಟನ್ನೂ. ಎಲ್ಲವನ್ನೂ. ಎಯ್ದೆ = ಚೆನ್ನಾಗಿ. ಕಾಯಲ್ವೇಟ್ಪುದು = ಕಾಯಬೇಕು. ಜಾಲ = ಸಮೂಹ, ಬಲೆ.

98. ಒಂದಾನುಂ = ಒಂದಾದರೂ. ಸಮ್ಮನಿಪ್ಪೊಡೆ = ಉಂಟಾಗುವುದಾದರೆ. ನಲ್ಮೆ = ಒಳ್ಳೆಯದು, ಉಪಕಾರ. ಪಾಡಱಿದು = ರೂಪುಗೆಟ್ಟು. ಪೊಲ್ಲಮೆ = ಕೆಟ್ಟದ್ದು, ಅಪಕಾರ.

99. ಕಿಸುಗಣ್ಬ = ಕೋಪಗೊಂಡು. ಭೋಂಕಲ್ = ಬೇಗನೆ. ರಸಯಿಂನೆ = ನಾಲಗೆಯಿಂದ. ಎರ್ದೆವಣ್ = ಮನಸ್ಸಿನ ಹುಣ್ಣು. ಅಸುವಿರ್ಪನ್ನೆವರಂ = ಪ್ರಾಣವಿರುವತನಕ. ಅೞಲಂ = ಸಂತಾಪವನ್ನು

100. ಪರಿಣತಿ = ಪಾಂಡಿತ್ಯ. ಕನಲ್ಕೆಗೆ = ಕೋಪಕ್ಕೆ. ಬಿಡದೆ = ಯಾವಾಗಲೂ. ಒಂದಿದನ = ಹೊಂದಿದವನ. ಪಾಗುಣಂ = ನಿರೀಕ್ಷಿಸುವನು. ಅಱಂ = ಯಮನು. ಯಮನು ಅವನ ಹತ್ತಿರ ಹೋಗಲು ಹೆದರಿ ಅವನ ಸಮಯವನ್ನು ಇದಿರು ನೋಡುತ್ತಿರುವನು.

101. ಆಚಾರಂ = ಒಳ್ಳೆಯ ನಡೆವಳಿ. ದೊರೆವಡೆದ = ಅತಿಶಯವಾದ. ಸಾರ್ಚುಗುಂ = ಉಂಟುಮಾಡುವುದು. ನೇರಿದರ್ = ಸತ್ಪುರುಷರು. ಕಾಪಿಡುವರ್ = ಕಾಪಾಡುವರು.

102. ಅಱಂ = ಧರ್ಮವು. ನೋೞ್ಪೆನಂ = ನೋಡಲು. ಓವಿ = ಎಚ್ಚರಿಕೆಯಿಂದ ಕಾವುದು = ರಕ್ಷಿಸಬೇಕು.

103. ನಡೆವಳಿ = ಆಚಾರ. ಸನ್ನುತಚಾರಿತ್ರಮೆ = ಒಳ್ಳೆಯ ನಡತೆಯೇ. ನೋೞ್ಪನ್ನಂ = ಆಲೋಚಿಸಿ ನೋಡಲು. ಕುಲೀನತೆಗೆ = ಒಳ್ಳೆಯಕುಲದವನೆಂಬುದಕ್ಕೆ. ಕುಱಿಪು = ಗುರುತು.

104. ಭೂದೇವಂ = ಬ್ರಾಹ್ಮಣನು. ಪ್ರಮಾದ = ಅಜಾಗರೂಕತೆ. ಮಗುೞ್ದು = ತಿರುಗಿ. ವಿಪ್ರತೆ = ಬ್ರಾಹ್ಮಣಿಕೆ.

105. ಒಳ್ಪಂ = ಅಭ್ಯುದಯವನ್ನು. ತೊಱೆವವನಿಂದೆ = ಬಿಡುವವನಿಂದ. ಉನ್ನತಿಕ್ಕೆ = ಪೂಜ್ಯತೆ.

106. ಆಚಾರಭ್ರಷ್ಟತೆಯಿಂ = ಆಚಾರವನ್ನು ಬಿಡೋಣದರಿಂದ. ನೀಚೈರ್ಗತಿ = ಅಧೋಗತಿ.

107. ಸಚ್ಚರಿತಂ = ಒಳ್ಳೆಯ ನಡತೆ. ಮಾಣಿಕವಚ್ಚದಿಂ = ಮಾಣಿಕ್ಯಾಭರಣದಿಂದ. ಒಗೆಗುಂ = ಹುಟ್ಟುವುದು. ಆಪಚ್ಚಯ = ಆಪತ್ತಿನ ಸಮೂಹ.

108. ಪುಣ್ಯಕೆ ಬಿತ್ತಾಗಿ-ಎಂದನ್ವಯವು. ಸುವೃತ್ತಂ = ಒಳ್ಳೆಯ ನಡತೆ.

109. ಸುರುಚಿರ = ಸುಂದರವಾದ, ಶ್ಲಾಘ್ಯವಾದ. ದೊರೆಕೊಳಿಸುವ = ಉಂಟುಮಾಡುವ.

110. ಕಲೆಯುಂ = ವಿದ್ಯೆಯನ್ನು. ಕಲ್ಲದಿರ್ಪ = ಕಲಿಯದೆ ಇರುವ. ಸಾಕಲ್ಯದೆ = ಸಂಪೂರ್ಣವಾಗಿ. ಕಲ್ಪಿ = ವಿದ್ಯೆ. ಅಱಿಯದರೆ ವಲಂ = ಅಜ್ಞಾನಿಗಳೇ ಸರಿ.

111. ಅಸವಸದಿಂದೆ = ಆತುರದಿಂದ. ಅವಧೀರಣೆ = ತಿರಸ್ಕಾರ, ಅಪಮಾನ. ಪಟಿಯೆ = ನಿಂದಿಸಲು. ಬಗೆಗುಂದದೆ = ವ್ಯಾಕುಲಪಡದೆ. ಅಣಂ = ಸ್ವಲ್ಪವೂ. ಅಣಂ ಬಗೆಗುಂದದೆ—ಎಂದನ್ವಯವು. ಬುವಿ = ಭೂಮಿ (ಸಂ). ಅಗಟಿರಂ = ಅಗೆವವರನ್ನು. ತಾಂಗುವವೋಲ್ = ಧರಿಸುವಹಾಗೆ.

112. ಪ್ರತಿಕರಿಸಲಾರ್ಪೊಡಂ = ಪ್ರತಿಮಾಡಲು ಶಕ್ತಿಯಿದ್ದರೂ. ಅತಿಕ್ರಮ = ಮಿತಿಮೀರಿದ ನಡತೆ. ಅಮರ್ಕೆ = ಹೊಂದಿಕೆ. ಮಾನ್ಯತರಂ = ಶ್ಲಾಘ್ಯತರವಾದುದು, ಸ್ಮೃತಿಪಥದಿಂದೆ ತೊಲಗಿಪ್ಪುದು = ಮರೆವುದು. ಅವಂ = ಅತಿಕ್ರಮಗಳನ್ನು. ತೊಲಗಿಪ್ಪುದು ಸ್ಥೈರಣೆಯಿಂದಂ ಮಾನ್ಯತರಂ—ಎಂದನ್ವಯವು.

113. ಎಡೆಗೆ = ತನ್ನಲ್ಲಿಗೆ. ಬಿರ್ದನರಂ = ಅತಿಥಿಗಳನ್ನು. ಕಡೆಗಣಿಪುದು = ಅಸಡ್ಡೆಮಾಡುವುದು. ಎಢರಂ = ಉಪದ್ರವವನ್ನು. ಬಲ್ಮೆ= ಪರಾಕ್ರಮ.

114. ಬೆಚ್ಚವೊಲ್ = ಬೆಸೆದಹಾಗೆ. ಸನ್ನಿದವಾಗಿರ್ಕೆ= ಸಂಗಡವೇ ಇರಲಿ. ಉನ್ನಿದ್ರತೆಯಿಂದೆ = ಜಾಗರೂಕತೆಯಿಂ ದ.

115. ಕಡೆಗಣ್ಚುತೆ= ಅಸಡ್ಡೆಮಾಡುತ್ತ. ಕಷ್ಟವಾಗಿ = ಹೀನವಾಗಿ. ಕತಿಗೊಳ್ಳದೆ =ಕೋಪಗೊಳ್ಳದೆ. ರತುನಂ =ರತ್ನ (ಸಂ.) ಕೊಂಡುಕೊನೆವರ್ =ಕೊಂಡಾಡುವರು.

116. ಮಸಗುತೆ= ರೇಗುತ್ತ. ಮುಯ್ಯೆಸಪರ್ಗೆ = ಪ್ರತಿಮಾಡುವವರಿಗೆ. ರಸೆಯೊಳ್= ಭೂಮಿಯಲ್ಲಿ.

117. ತಗದು =ಅನುಚಿತವಾದುದು. ಪೊಲ್ಲಮೆ =ಕೇಡು. ನೆಗಟ್ಟಿದಂ =ಮಾಡಿದವನು. ಮುಂದೆ = ಇನ್ನೊಂದು ಜನ್ಮದಲ್ಲಿ. ಎನಸುಂ = ವಿಶೇಷವಾಗಿ. ಬಗೆನೊಂದು = ಖೇದವನ್ನು ಹೊಂದಿ. ಧರ್ಮಾಪಗತಮುಂ = ಧರ್ಮಕ್ಕೆ ವಿರುದ್ಧವಾದ. ಏನುಮಂ= ಏನನ್ನೂ. ಒಡರ್ಚದೆ =ಮಾಡದೆ.

118. ಕಡುಸೊರ್ಕಿನಿಂ= ವಿಶೇಷವಾದ ಅಹಂಕಾರದಿಂದ. ಕೆಯ್ದುವಿಂದಂ= ಆಯುಧದಿಂದ. ಗೆಲ್ಗೆ= ಗೆಲ್ಲಲಿ.

119. ಇನಿಸುಂ = ಸ್ವಲ್ಪವೂ. ಬಗೆನೋಯದೆ = ಖೇದವನ್ನು ಹೊಂದದೆ. ಇರದೆ = ಸಾವಕಾಶಮಾಡದೆ.

120. ನೋಂಪಿಗಳಂ = ವ್ರತಗಳನ್ನು. ಪಿಸುಣ = ಪಿಶುನ (ಸಂ). ಬಿಱುನುಡಿಯಂ = ಕಠಿನೋಕ್ತಿಯನ್ನು. ಬಿಟ್ಟಿತು + ನುಡಿ. ಅವರತ್ತಣಿಂದೆ = ಅವರಿಗಿಂತ.

121. ಒಳ್ಪಂ = ಅಭ್ಯುದಯವನ್ನು. ಕಱುಂಬದಿರ್ಪ = ಹೊಟ್ಟೆಗಿಚ್ಚುಪಡದೆ ಇರುವ. ಆಚರಣಕೆ = ನಡೆವಳಿಗೆ. ಅಱಿಕೆಯ ಕುಱಿಪು = ಸ್ಪಷ್ಟವಾದ ಗುರುತು. ನೆಗೞ್ವೇೞ್ಕುಂ = ನಡೆದುಕೊಳ್ಳಬೇಕು.

122. ಕೆಳೆ = ಸ್ನೇಹಿತ. ಪಗೆ = ಶತ್ರು. ಆರ್ಪೊಡೆ = ಸಾಧ್ಯವಾದರೆ. ಅಳವಡುವ = ಉಂಟಾಗುವ.

123. ಒಲವರಮುಂ = ಸಂತೋಷವನ್ನು. ಅಣಂ = ಸ್ವಲ್ಪವೂ. ಅಟ್ಕಿಜಂಬಡುವವರ್ = ಹೊಟ್ಟೆಗಿಚ್ಚುಪಡುವವರು. ಪರತ್ರೆಗಂ = ಪರಲೋಕಕ್ಕೂ. ನಿಸದಂ = ನಿಜವು.

124. ಅಟ್ಕಿಜದಿಂದೆ = ಅಸೂಯೆಯಿಂದ. ಅದವಟಿಲಂ = ದುಃಖವನ್ನು. ಆನಿಳರ್ = ವ್ಯಾಕುಲರು.

125. ಬಟ್ಟುಂಕಿದೊಡಂ = ತಪ್ಪಿಸಿಕೊಂಡರೂ. ಸಾಲ್ಗುಂ = ಸಾಕು. ಅನಿತ್ತಂ = ಅಷ್ಟನ್ನೂ.

126. ಎರೆವರ್ಗ್ಗೆ = ಬೇಡುವವರಿಗೆ. ಚಾಗಿ = ತ್ಯಾಗಿ (ಸಂ). ಉಡೆ = ವಸ್ತ್ರ. ಉಣಿಸು = ಆಹಾರ. ಧರಿಸಲ್ ಉಡೆಯುಂ ಉಣಲ್ ಉಣಿಸುಂ—ಎಂದನ್ವಯವು. ಅಟಲ್ವಂ = ದುಃಖಪಡುವನು.

127. ಸರಸೀರುಹಮಂದಿರೆ = ಕಮಲವನ್ನು ವಾಸಸ್ಥಾನವಾಗಿ ಉಳ್ಳ. ಇಂದಿರೆ = ಲಕ್ಷ್ಮಿ. ಅಕ್ಕಂಗೆ = ಲಕ್ಷ್ಮಿಯ ಅಕ್ಕನಾದ ಜ್ಯೇಷ್ಠಾದೇವಿಗೆ, ಮೂದೇವಿಗೆ.

128. ಸರಿ = ಸಮಾನವು. ನೆಲೆಯಾದವನ = ವಾಸಸ್ಥಾನವಾದವನ.

129. ಎಡರುಂ = ದಾರಿದ್ರ್ಯವೂ.

130. ಆವಿಲ = ಕಲುಷಿತವಾದ. ಪರಿಕಿಸುವೊಡೆ = ಪರೀಕ್ಷಿಸಿ ನೋಡಿದರೆ.

131. ಕೆಯ್ಯುಡುಕುವುದು= ಕೈಹಾಕುವುದು. ಅಳಿಪ ಲೊಡಂ= ಆಸೆಪಡಲು. ಸದರ್ಥಕ್ಕೆ ಅಳಿಪಲೊಡಂ—ಎಂದನ್ವಯವು. ಸ್ಪೃಹೆ = ಆಸೆ. ತಱಿಗುಂ = ಕತ್ತರಿಸುವುದು. ಕೋಟಲೆ= ಸಂಕಟ.

132. ಪುರುಳಿಂದೆ= ದ್ರವ್ಯದಿಂದ. ಉರು = ಅಧಿಕವಾದ. ಅಟಿಗೆಯ್ತಗಳಂ = ದುಷ್ಕೃತ್ಯಗಳನ್ನು. ಅನವದ್ಯಗುಣರ್ = ನಿರ್ದುಷ್ಟವಾದ ಗುಣವುಳ್ಳವರು.

133. ವಸುವಿಂದೆ = ಧನದಿಂದ. ಜಘನ್ಯ = ಹೇಯವಾದ. ಆಟಿಸುವರ್ = ಆಸೆಪಡುವವರು.

134. ಬಡವರೆವು = ಬಡವರಾಗಿದ್ದೇವೆ. ಶ. ಮ. ದ. ಸೂತ್ರ 219. ಪಿಂಗಿಸಲ್ಕೆ = ನೀಗಲು. ಲೋಗರ = ಅನ್ಯರ. ಸಡಗರಿಸಿ = ತವಕದೊಡನೆ. ಉಡಿದ = ಅಡಗಿಸಿದ, ಜಯಿಸಿದ.

135. ಕೂರಱಿವಿಂಗೆ = ಸೂಕ್ಷ್ಮಬುದ್ಧಿಗೆ. ಆಗರಂ= ನೆಲೆ. ತಗದ = ಉಚಿತವಲ್ಲದ. ಉಱಿದೆ = ಹಿಂಜರಿಯದೆ.

136. ದುರುಪಾಯ = ಕೆಟ್ಟ ಉಪಾಯದ. ಅಟಿವಂ= ನಾಶಹೋದುವನು.

137. ಕೂರಲ್ವೇಡಂ = ಆಸೆಪಡಬೇಡ. ತರಹರಿಸಲಾಗದ = ಸಹಿಸಕೂಡದ. ಏವದ = ದುಃಖದ. ಹರವರಿಯಂ= ವ್ಯಾಪ್ತಿಯನ್ನು, ಆಧಿಕ್ಯವನ್ನು. ಅಟಲಿಕುಂ = ಸಂತಾಪಪಡಿಸುವುದು.

139. ಪೆಱಲ್ = ಪಡೆಯಲು. ಆಟಿಪುದು = ಆಸೆಪಡುವುದು ತೆಱಪಂ = ಸಮಯವನ್ನು. ಪಾರ್ದಿರ್ಕುಂ = ನಿರೀ

ಕ್ಷಿಸುತ್ತ ಇರುವಳು. ಅಂಬು........ತ್ರಂ = ವಿಷ್ಣುಪತ್ನಿಯಾದ ಲಕ್ಷ್ಮಿ.

140. ಪಿಂ = ಹಿಂದೆ, ಅನಂತರ. ಆದಂ = ಹೆಚ್ಚಾಗಿ. ಬನ್ನಂಬಡುವಂ = ಭಂಗಪಡುವನು. ಅಲೋಭಂ = ದುರಾಸೆಯಿಲ್ಲದಿರುವುದು. ಬೀಱದೆ = ಕೊಡದೇ ?

141. ಅಱನೆಂಬ ನುಡಿಯುಂ ನುಡಿಯದೆ = ಧರ್ಮ ಎಂಬ ಶಬ್ದವನ್ನೂ ಉಚ್ಚರಿಸದೆ. ತಡೆಯದೆ = ಹಿಂದೆಗೆಯದೆ. ಇವಂ ಪಿಸುಣಾಡಂಗಡಂ = ಇವನು ಚಾಡಿಹೇಳುವವನಲ್ಲ. ಪಡೆವೊಡೆ = ಹೊಂದುವನಾದರೆ. ಒಳ್ಜಸಮುಂ ಪಡೆವೊಡೆ—ಎಂದನ್ವಯವು.

142. ಕಿಡೆನುಡಿದು = ಕೆಟ್ಟಮಾತನ್ನು ಹೇಳಿ. ಪೆಱಗೆ = (ಒಬ್ಬನ) ಹಿಂದೆ. ಅಟಿಯೆ ನುಡಿದು = ದೂಷಿಸಿ. ಪೊಲ್ಲದು = ಕೆಟ್ಟದು.

143. ಪಿಸುಣ್ಗೆಡೆದು = ದೂಷಿಸಿ, ಚಾಡಿಹೇಳಿ. ಉಕೆವದಿಂದೆ = ಮೋಸದಿಂದ. ಕೊಂಡುಕೊನೆದು = ಕೊಂಡಾಡಿ. ಪೊಂದುವುದು = ಸಾವುದು.

144. ಒದಱಿದೊಡಂ = ಗಟ್ಟಿಯಾಗಿ ಕೂಗಿ ಹೇಳಿದರೂ. ಆರಯ್ಯದೆ = ಆಲೋಚಿಸದೆ.

145. ಪಿಸುಣಂ = ಪಿಶುನ (ಸಂ), ನೀಚನು. ಎಸಗಿಂ = ಮಾಡಿ. ಪಿಸುಣಾಡುಗುಂ = ಸೂಚಿಸುವುದು. ಪಟುತೆ = ಸಾಮರ್ಥ್ಯ.

146. ಅನ್ನೆಯಂ = ಅನ್ಯಾಯ (ಸಂ). ಕೆನ್ನಂ = ವಿಶೇಷವಾಗಿ. ಬನ್ನಂಬಡಿಸದೆ = ಭಂಗಪಡಿಸದೆ. ಮಾಣ್ಬನೆ = ಬಿಡುವನೇ ?

147. ಇನಿನುಡಿಯುಂ = ಒಳ್ಳೆಯ ಮಾತನ್ನು. ಪರರೊಳಂ = ಹೊರಗಣವರಲ್ಲಿಯೂ. ಅನುಗೊಳಿಪುದು = ಉಂಟು ಮಾಡುವುದು. ಸುಕರಂ = ಸುಲಭ. ಕೆಳೆತನಮಂ = ಸ್ನೇಹವನ್ನು. ಕೆಳೆತನಮಂ ಅನುಗೊಳಿಪುದು—ಎಂದನ್ವಯವು. ಸರಿವಂತು = ಬಿಟ್ಟುಹೋಗುವಹಾಗೆ.

148. ಒಡವೆರೆದ = (ತಮ್ಮ) ಸಂಗಡ ಸೇರಿದ. ಮನವೊಲ್ವ = ಸಂತೋಷಿಸುವ. ಒಡರಿಸುವರೊ = ಮಾಡುವರೋ.

149. ಎರವಿಲ್ಲದೆ = ಭೇದವಿಲ್ಲದೆ. ಧರಿಪುದು ತನಗೆ ಧರ್ಮಂ—ಎಂದನ್ವಯವು. ಸರ್ವಂಸಹೆ = ಭೂಮಿ.

150. ನೋಡುವೊಡೆ = ನೋಡುವರಾದರೆ. ಭಾಜನರಪ್ಪರ್ = ಎಡೆಯಾಗುವರು.

151. ಜುಗುಪ್ಸೆ = ಹೇಸಿಕೆ. ಆದಂ = ಹೆಚ್ಚಾಗಿ. ಬಱುಮಾತು = ವ್ಯರ್ಥವಾದ ಮಾತು. ಬಱಿದು+ಮಾತು. ಸೊಲ್ಲಿಸುವ = ಹೇಳುವ. ತೆಗಟಿಲ್ಪಡುಗುಂ = ನಿಂದಿಸಲ್ಪಡುವನು.

152. ಕೆಳೆಗೊಂಡರೊಳ್ = ಸ್ನೇಹಮಾಡಿದವರಲ್ಲಿ. ಅತ್ಯಾಹಿತಮಂ = ಪ್ರಬಲವಾದ ಕೇಡನ್ನು. ಪೊರೆಯೊಳ್ = ಸಮೀಪದಲ್ಲಿ. ಪುರುಳ್ = ಅರ್ಥ, ಸಾರ.

153. ಅಸಮೀಚೀನಂ = ಅಸಂಬದ್ಧವಾದುದು. ನೀರಸಂ = ರಸವಿಲ್ಲದುದು. ಉರ್ವಿಸಿ = ಹೆಚ್ಚಿಸಿ. ಬಿಚ್ಚಟಿಸುವ = ವಿಸ್ತರಿಸುವ. ಪಿಸುಣಾಡವೆ = ಸೂಚಿಸವೇ? ಪೇಟಿ = ಹೇಳು. ಅವಿನೀತತೆ = ಕೆಟ್ಟನಡತೆ.

154. ಮಾಣಿಕುಂ = ತೊಲಗಿಸುವುದು. ಅಘಕಂ = ಪಾಪಕ್ಕೂ.

155. ತಗುಳ್ದೊಡೆ = ಆರಂಭಿಸುವರಾದರೆ. ಪೊಗೞೆವೆತ್ತ = ಸ್ತುತಿಪಾತ್ರವಾದ.

156. ಪಲರ್ಮೆ = ಅನೇಕಾವೃತ್ತಿ. ಅಳುಂಬಂ = ವಿಶೇಷವಾಗಿ. ಪಲಾಲಂ = ಜಳ್ಳು.

157. ಅಮರ್ಕೆ = ಹೊಂದಿಕೆ. ಆಡುಗೆ = ಆಡಲಿ. ಆತಂಗಳ್ = ಅವರು.

158. ಅನವದ್ಯಂ = ದೋಷರಹಿತವು. ಅಱಿವಿಂಗೊಡೆಯರ್ = ಜ್ಞಾನಿಗಳು. ಎನಸುಂ = ಹೆಚ್ಚಾಗಿ. ಅನುಗೊಳಿಸದ = ಉಂಟುಮಾಡದ. ಪಸೆಯಂ = ನಿಸ್ಸಾರವಾದ ಮಾತನ್ನು. ಅಣಂ = ಸ್ವಲ್ಪವೂ.

159. ತೊಡರ್ಗೆ = ಪಾಶಕ್ಕೆ. ಪ್ರಮುಷಿತವಿವೇಕರ್ = ವಿವೇಕಶೂನ್ಯರು.

160. ನುಡಿವೊಡೆ = ಹೇಳಬೇಕಾದರೆ. ನುಡಿಗೆ = ಹೇಳಲಿ. ಪಡಿಯಂ = ದ್ವಾರವಾದ. ಉಱಿಗೆ = ಬಿಡಲಿ.

161. ಸುಗಿದು = ಹೆದರಿ. ಏಪೊೞ್ತುಂ = ಯಾವಾಗಲೂ. ಅೞ್ದ = ಮುಳುಗಿದ.

162. ದುಗುಡಮನೆ = ದುಃಖವನ್ನೇ. ಅಗಿವರ್ = ಹೆದರುವರು. ಉರಿವ = ಜ್ವಲಿಸುವ.

163. ವಿಮತರೊಳಂ = ವೈರಿಗಳಲ್ಲಿಯೂ. ಪೊಲ್ಲಕೆಯ್ದಿರ್ಪುದು = ಕೇಡನ್ನು ಮಾಡದಿರುವುದು.

164. ಅಟಿಗೆಯ್ತ್ತಮಂ = ಕೆಟ್ಟಕೆಲಸವನ್ನು. ಪುಚ್ಚಟಿಯಂ = ಕೇಡನ್ನು. ಧರ್ಮಂ. = ಧರ್ಮದೇವತೆ.

165. ಬಡವನೆಂ = ಬಡವನಾಗಿದ್ದೇನೆ. ಶ. ಮ. ದ. ಸೂತ್ರ 219. ಅಗಲ್ಗುವೇ = ನೀಗುವುದೇ ? ದಾಂಗುಡಿವಿಟ್ಟು = ಶಾಖೋಪಶಾಖೆಯಾಗಿ. ಅಗ್ಗಲಿಸಿ = ವಿಸ್ತರಿಸಿ

163. ಅರೆಯಟ್ಟಿ = ಹಿಂದಟ್ಟಿಬಂದು. ಅಟಿಲ್ಚವೇಡಂ = ಸಂಕಟಪಡಿಸಬೇಡ. ಮಾಣ್ಗೆ = ಬಿಡಲಿ.

167. ಪೆಱವಗೆಯಿಂ = ಇತರ ಶತ್ರುಗಳಿಂದ. ಎಂತಾನುಂ = ಹೇಗಾದರೂ. ಅಟಿವಗೆ = ನೀಚಶತ್ರು. ಆಟಂದು= ಓಡಿಸಿಕೊಂಡು ಬಂದು. ಕೂಗಿಯೆ =ಆರ್ಭಟಿಸಿಯೇ. ಮಾಣ್ಗಂ = ಬಿಡುವುದು.

168. ನಿಡಿದಾಗಿ = ಉದ್ದವಾಗಿ. ಎಡರ್ = ಕಷ್ಟವು, ಸಂಕಟವು. ಬೆನ್ನೊಳ್ = ಹಿಂದೆಯೇ.

169. ಉತ್ಪಾದನಂ = ಹುಟ್ಟಿಸುವುದು. ಬೀಜಾವಾಪಂ = ಬೀಜವನ್ನು ಬಿತ್ತುವುದು. ಕೂರ್ಪೊಡೆ = ಪ್ರೀತಿಸುವರಾದರೆ. ಅಣಂ = ಸ್ವಲ್ಪವಾದರೂ.

170. ಲೋಗಗ್ಗೆ = ಇತರರಿಗೆ. ಏತೆಱದಲ್ಲಿಯುಂ = ಯಾವರೀತಿಯಲ್ಲಿಯೂ. ನಿಸದಂ = ಸತ್ಯವು.

171. ಒಸೆದು = ಪ್ರೀತಿಸಿ. ಪಾರರ್ = ನಿರೀಕ್ಷಿಸರು. ಧಾರಾಧರಕ್ಕೆ = ಮೇಘಕ್ಕೆ.

172. ಗಟಿಯಿಪ = ಕೂಡಿಸುವ. ಪುರುಳ್ = ಧನ. ಬಯ್ತಿರಿಪ್ಪುದರ್ಕೆ೯ಂ = ಹೂತಿಡುವುದಕ್ಕೂ.

173. ದೊರೆವಡೆದ = ಪ್ರಸಿದ್ಧವಾದ. ಅಱಂಗಳೊಳಗೆ = ಧರ್ಮ್ಮಗಳಲ್ಲಿ.

174. ಪುಣ್ಯಶ್ಲೋಕರೆ = ಕೀರ್ತಿವಂತರೆ, ಮಹಾನುಭಾವರೆ. ವರಾಕರ್ = ಅಲ್ಪರು, ನೀಚರು. ಸುಯ್ವ = ಉಸಿರು ಬಿಡುವ.

175. ಇನಿನೀರ್ = ಮಧುರವಾದ ನೀರು. ಇನಿದು+ನೀರ್. ಸಾರಸಸಂಭವೆಯು = ಕಮಲದಲ್ಲಿ ಹುಟ್ಟಿದ ಲಕ್ಷ್ಮಿಯು. ಅಗಾರಂ = ನೆಲೆ, ಸ್ಥಾನ.

176. ಸಾರಲ್ = ಸೇರಲು. ತನಿವಣ್ = ಪಕ್ವವಾದ ಹಣ್ಣು. ತಳ್ತವೊಲ್ = ವ್ಯಾಪ್ತವಾದಹಾಗೆ.

177. ಕುತ್ತಗಳಂ = ಜಾಡ್ಯಗಳನ್ನು. ತುತ್ತುವ = ಕಬಳಿಸುವ, ನಾಶಮಾಡುವ. ಗಿಡು = ಮೂಲಿಕೆ, ಪತ್ತುಗೊಳಲ್ = ನೆಲಸಲು.

178. ಸಂಗಳಿಸಿದ = ತಮ್ಮನ್ನು ಸೇರಿದ್ದ. ಪಿಂಗಿದೊಡಂ = ತೊಲಗಿದರೂ. ಮಾಡುವುದಂ ಉಟಿದಪರೇ—ಎಂದನ್ವಯವು.

179. ಹರಿಪುದಱೊಳ್ = ಹೋಗಾಡಿಸುವುದರಲ್ಲಿ. ಬೇಗುದಿಗೊಳ್ವರ್ = ತಪಿಸುವರು.

180. ದಂದುಗಂಬಡದೆ = ವ್ಯಾಕುಲಪಡದೆ. ಪರಿವರ್ತಿಸಿಯುಂ = ಮಾರಿಯಾದರೂ.

181. ನೀಡಿಲ್ಲದೆ = ಸಾವಕಾಶಮಾಡದೆ. ಚಾಗಂ = ದಾನ, ತ್ಯಾಗ (ಸಂ). ಕೋಡು = ದಾನ. ಧಾತು—ಕುಡು. ಕಡಂ ದಲ್ = ಸಾಲವೇಸರಿ.

182. ನಿಸ್ಸ್ವರೊಳ್ = ದರಿದ್ರರಲ್ಲಿ. ಸದ್ಗತಿ........ರಂ = ಸದ್ಗತಿಯನ್ನು ತಡೆವುದು.

183. ಬಡವರೆವು = ಬಡವರಾಗಿದ್ದೇವೆ. (134 ನೆಯ ಪದ್ಯವನ್ನು ನೋಡಿ). ನುಡಿಯುದುದು = ನುಡಿಯದಿರುವುದು. ಕುಲೀನರೊಳ್ = ಒಳ್ಳೆಯ ಮನೆತನದವರಲ್ಲಿ.

184. ಅನಿತ್ತೆ = ಅಷ್ಟೇ—ಎಂದರೆ ದುಃಖದಂ. ಕಾಣ್ಬನ್ನೆವರಂ = ಕಾಣುವವರೆಗೂ. ನಾಡೆಯುಂ = ಹೆಚ್ಚಾಗಿ. ಮೊಗಮಂ ಕಾಣ್ಬನ್ನೆವರಂ—ಎಂದನ್ವಯವು.

185. ಬಲ್ಮೆ = ಸಾಮರ್ಥ್ಯ. ವಿತರಣದ = ದಾನದ. ಎಸಕದೆ = ಅತಿಶಯದಿಂದ. ಪಱಿಯಿಪರ = ಹೋಗಾಡಿಸುವರ.

186. ನೆರವು = ಸಹಾಯ. ಕಡವರಮಂ = ಧನವನ್ನು. ಪದುಳಂ = ಸುರಕ್ಷಿತವಾಗಿ.

187. ಒಟ್ಟಜೆಯಿಂದಂ = ಔದಾರ್ಯದಿಂದ. ಅಟ್ಟುಳಿಯಂ = ಹಿಂಸೆಯನ್ನು. ಪಡೆದು = ಉಂಟುಮಾಡಿ. ಗದಂ = ಜಾಡ್ಯ.

188. ಮಡಲಿಱಿದ = ಅಧಿಕವಾದ. ಅಳಿಪಿಂದೆ = ಆಶೆಯಿಂದ. ಮಡಗುವ = ಬಚ್ಚಿಡುವ.

189. ಅಕ್ಕೆ = ಆಗಲಿ.

190. ವಸುಂಧರಾ....ದೊಳ್ = ಭೂಮಂಡಲದಲ್ಲಿ. ದುರ್ದೈವದೆ = ದುರದೃಷ್ಟದಿಂದ.

191. ಎಡೆ = ಪಾತ್ರ. ಮೇಣ್ = ಮತ್ತೂ.

192. ತೊಡರ್ದು = ಎಡೆಬಿಡದೆ. ಕನ್ನಡಿಕುಂ = ಪ್ರಕಟಿಸುವುವು. ಕಬ್ಬಂ = ಕಾವ್ಯ (ಸಂ).

193. ದಿಗಂತಂಬರಂ = ದಿಕ್ಕುಗಳ ಕೊನೆಯವರೆಗೆ. ಎಟ್ಟರದಿಂದಂ = ಉನ್ನತಿಯಿಂದ, ಮಹಿಮೆಯಿಂದ. ತಿರಂ = ಸ್ಥಿರ (ಸಂ).

194. ನಿಱಿಸಿ = ನಿಲ್ಲಿಸಿ. ದಿವಿಜರ್ = ದೇವತೆಗಳು.

195. ಎಸಕಮುಂ = ಕಾಂತಿಯನ್ನು. ಎಡರ್ = ದಾರಿದ್ರ್ಯ, ಕ್ಲೇಶ. ಕಸದೊಡಲ = ಹೇಯವಾದ ಶರೀರದ.

196. ಪುಟ್ಟುವೊಡೆ = ಹುಟ್ಟಬೇಕಾದರೆ. ಪುಟ್ಟುಗೆ = ಹುಟ್ಟಲಿ. ಅದಱಿಂದೆ = ಆ ಗುಣದಿಂದ. ಇಟ್ಟಳವಾಗದರ್ = ವ್ಯಾಪ್ತರಾಗದವರು.

197. ತೆಗೞೆ = ನಿಂದಿಸಲು. ನೆಗೞದ = ವರ್ತಿಸದ. ತೆಗೞ್ಗೆ = ನಿಂದೆಗೆ. ತವರ್ = ಸ್ಥಾನ.

198. ಆವುದಾನುಂ = ಯಾವುದಾದರೂ. ವಿತೆ = ವ್ಯರ್ಥ, ವೃಥಾ (ಸಂ.)

199. ಪೊಲಸಾಗದ = ಪಾತ್ರರಾಗದ. ಪಲಸೂೞ್ = ಹಲವುಸಾರಿ.

200. ಪೊಂದದ = ನಾಶವಾಗದ ಬಾೞ್ವಂ = ಬದುಕಿದವನು. ಪಕ್ಕಾದವನಂ = ಎಡೆಯಾದವನನ್ನು. ಪೊಂದಿದಂ = ಸತ್ತವನು. ಪುರುಳ್ = ಸಾರ, ಗುಣ.

201. ಒರೆಗಂ ದೊರೆಗಂ = ಸರಿಸಮಾನಕ್ಕೆ. ಕಷ್ಟರೊಳಂ= ನೀಚರಲ್ಲಿಯೂ.

202. ಅಮರ್ದಿರೆ=ಹೊಂದಿಕೆಯಾಗಿರುವಂತೆ. ಅದು = ದಯೆ. ಸಮಯಂ= ಮತ.

203. ಪೂರಂ =ಪ್ರವಾಹವು. ವೇದನಾರವ = ಯಾತನೆಯ ಕೂಗು.

204. ಭೂತಂಗಳೊಳ್ = ಪ್ರಾಣಿಗಳಲ್ಲಿ. ಅನುಕಂಪೆಯಂ = ದಯೆಯನ್ನು. ಚೇತಕೆ= ಮನಸ್ಸಿಗೆ. ತವಿಪ =ಕೊಲ್ಲುವ ಸಂಕಟಪಡಿಸುವ.

205. ತುಱುಗಿದ = ವ್ಯಾಪ್ತವಾದ. ಸಕ್ಕಿಗಳ್ = ಸಾಕ್ಷಿಗಳು.

206. ಮಱುಕಮಂ = ದಯೆಯನ್ನು. ದುಱುದುಂಬಿತನಕ್ಕೆ = ದುಷ್ಟತನಕ್ಕೆ. ಪಕ್ಕುಗುಡುವ = ಅವಕಾಶವನ್ನು ಕೊಡುವ.

207. ಪುರುಳ್=ದ್ರವ್ಯ. ಅನುಭೂತಿ = ಅನುಭವ.

208. ದುರ್ದೈವದೆ=ದುರದೃಷ್ಟದಿಂದ. ಎಂದಾನುಂ= ಯಾವಹೊತ್ತಾದರೂ. ಬಟ್ಟಿಪಂ= ಬಾಳುವವನು. ಅಟಿದವನೆವಲಂ= ನಾಶವಾದವನೇ ಸರಿ.

209. ಬೆಳ್ಳಕ್ಕರಿಗರ್=ಅಜ್ಞರು, ಮೂಢರು. ವೇದೋದಿತ=ವೇದದಲ್ಲಿ ಹೇಳಿರುವ.

210. ಅದಿರದೆ =ಹೆದರದೆ. ನೆನೆಗೆ=ಸ್ಮರಿಸಲಿ. ಅದಿರ್ಪಲ್= ಹೆದರಿಸಲು, ಹಿಂಸಿಸಲು. ಇರವಂ=ಸ್ಥಿತಿಯನ್ನು.

211. ಅಡಗಂ= ಮಾಂಸವನ್ನು. ಕೆನ್ನಂ=ವಿಶೇಷವಾಗಿ. ನೇರ್ದು= ಕೊಂದು.

212. ಕಾಪಿಟ್ಟೋವದ= ಕಾಪಾಡಿರಕ್ಷಿಸದ. ಅರ್ಥವ್ರಾತಂ =ಧನಸಮೂಹ.

213. ಕೆಯ್ದುವಂ=ಆಯುಧವನ್ನು. ಪಾರ್ದಿರ್ಕ್ಕುಗಂ= ಇದಿರುನೋಡುತ್ತಿರುವುದು.

214. ಹಿಂಸಾಜನ್ಯಂ = ಹಿಂಸೆಯಿಂದ ಉಂಟಾಗುವುದು. ತರಸಂ=ಮಾಂಸವು.

215. ಅಡದಿನ್ನದ=ಮಾಂಸವನ್ನು ತಿನ್ನದ, .ಅಡಗು + ತಿಽ =ಅಡದಿಽ. ಪಡಿದೆಱೆದು=ಬಾಗಿಲನ್ನು ತೆಗೆದು.

216. ಬಿಕ್ಕಂ= ಮಾಂಸವನ್ನು. ಇಕ್ಕರ್=ಕೊಲ್ಲರು.

217. ಪೂತಿಗಂಧಿವ್ರಣಂ=ಹೇಸಿಕೆಯನಾತವುಳ್ಳ ಹುಣ್ಣು

218. ಎಡೆಯಂ =ಅವಕಾಶವನ್ನು. ಆಡುಂಬೊಲನಾದ= ವಿಹಾರಸ್ಥಾನವಾದ.

219. ಸವಮಂ= ಯಾಗವನ್ನು. ಜೀವಮಂ = ಪ್ರಾಣಿಯನ್ನು. ಅರಿದು = ಕೊಂದು, ಕತ್ತರಿಸಿ.

220. ಉಱಿದು= ಬಿಟ್ಟು. ಅಡಗಂ ತಿನ್ಬ ಪಾಪಮಂ ಉಱಿದು— ಎಂದನ್ವಯವು. ನೆಗೞ್ವವನಂ = ವರ್ತಿಸುವವನನ್ನು. ಕುಂಬಿಡುಗುಂ= ಸಮಸ್ಕರಿಸುವುದು. ಅಸಕಟಿದ= ಅತ್ಯಧಿಕವಾದ.

221. ನೇರಿದನಾಗಲ್ಕೆ= ಸರಳನಾಗಲು,ಒಳ್ಳೆಯವನಾಗಲು.

222. ಎಱಗಲ್=ಪ್ರವೇಶಿಸಲು. ತೆಱಪುಗುಡುವೊಡೆ= ಅವಕಾಶವನ್ನು ಕೊಡುವರಾದರೆ. ಏಗೆಯ್ವುದೋ = ಏನ್ನು ಪ್ರಯೋಜನವನ್ನು ಉಂಟುಮಾಡುವುದೋ.

223. ನೆಱೆಯದೆ=ಸಮರ್ಥನಾಗದೆ. ಕಿತ್ತಡಿವರಿಜಾಂತು= ಋಷಿವೇಷವನ್ನು ವಹಿಸಿ. ಬೆಸಕೆಯ್ವ = ದಾಸನಾಗಿರುವ, ಅಧೀನನಾಗಿರುವ. ಕೆಯ್ಗಳೊಳ್ = ಗದ್ದೆಗಳಲ್ಲಿ. ವೃಷಮಂ= ಎತ್ತನ್ನು.

224. ಖಲಂ= ನೀಚನು. ತವಸಿಯ = ತಪಸ್ವಿಯ. ಜೋಹದ= ವೇಷದ. ಖಗಾಳಿ= ಪಕ್ಷಿಸಮೂಹವನ್ನು.

225. ಪಱದೆಂ = ಕಿತ್ತುಹಾಕಿದೆನು, ನಾಶಮಾಡಿದೆನು. ಪತ್ತಂ=ಬಂಧವನ್ನು. ಒಱಲ್ವಿನಂ = ಹಲುಬುವಂತೆ, ಪ್ರಲಾಪಿಸುವಂತೆ.

226. ಸ್ಪೃಹೆಯಂ=ಆಶೆಯನ್ನು. ತೊಱೆದರವೋಲ್= ಸನ್ಯಾಸಿಗಳ ಹಾಗೆ, ವಿರಕ್ತರಹಾಗೆ. ಅಱಗುಲಿವೋಲ್=ಧರ್ಮಘ್ನನಹಾಗೆ, ನೀಚನಹಾಗೆ.

227. ಗುಂಜಿ= ಗುಲುಗಂಜಿ. ಕರಂ = ವಿಶೇಷವಾಗಿ. ರಂಜಕರ್ =ರಂಜನೆಯುಂಟುಮಾಡುವರು. ಮಂಜು= ಮನೋಹರವಾಗ. ಒಳಗೆ= ಮನಸ್ಸಿನಲ್ಲಿ. ಅಂಜನವರ್ಣರ್ಕಳ್ = ಕಪ್ಪು ಬಣ್ಣವುಳ್ಳವರು, ಕಳಂಕಿಗಳು. ಆದರುಂ= ಆದವರೂ.

228. ಕಱೆ=ಕಳಂಕವು. ಕಿತ್ತಡಿ=ಋಷಿ. ತೊಱೆ= ನದಿ. ಬೈಡಾಲಕವೃತ್ತಿ= ಬೆಕ್ಕಿನನಡತೆ, ಕಪಟವಾದನಡೆವಳಿ. ಧೂರ್ತರ್ =ವಂಚಕರು. ಎನಿಬರೊ=ಎಷ್ಟುಜನವೋ.

229. ನೇರಿತು=ಸರಳವು. ವಿಪಂಚಿ= ವೀಣೆ. ನೇರಿದರ್= ಒಳ್ಳೆಯವರು. ಅಲ್ಲದರ್=ವಂಚಕರು. ಏವುದೊ= ಏನುಪ್ರಯೋಜನವೋ.

230. ಪಿರಿಯರ= ಹಿರಿಯರು—ಪ್ರಥಮಾರ್ಥದಲ್ಲಿ ಷಷ್ಠಿ. ಎಸಕ= ಕೆಲಸ. ಕ್ಷತಿ= ದೋಷ, ಕೊರತೆ.

231. ಎನ್ನದುಮಂ=ಎಂಥದನ್ನೂ. ಒಡವೆ = ವಸ್ತು. ಕಾವುದು = ಕಾಯಬೇಕು. ಅಪ್ರಮತ್ತತೆಯಿಂದಂ = ಜಾಗರೂಕತೆಯಿಂದ.

232. ಕಾಟ್ಗೆಯ್ತ = ದುಷ್ಕೃತ್ಯ. ಅಘಮೆವಲಂ = ಪಾಪವೇಸರಿ.

233. ಕಸವರಂ= ಹೊನ್ನು. ಅಗುಂತಿವಡೆದು=ಹೆಚ್ಚಿ. ಅಗ್ಗಲಿಪಂತಿರೆ = ವಿಸ್ತಾರವಾಗುವಹಾಗೆ. ಮೆಯ್ಗರೆಗುಂ = ಮಾಯವಾಗುವುದು, ಅದೃಶ್ಯವಾಗುವುದು. ಕೂಡೆ= ಸಂಗಡಲೇ.

234. ಸ್ತೇಯದೊಳ್ = ಕಳವಿನಲ್ಲಿ. ಆಳಿಪು = ಆಸೆ. ಆಪ್ಯಾಯನಂ = ಹಿತಕರ. ಆಯತಿಯೊಳ್ = ಮುಂದೆ. ಬೀಯದ=ಕೆಡದ. ಬೇವಸಮುಂ= ಚಿಂತೆಯನ್ನು.

235. ಬಂಚಿಸಿ = ವಂಚಿಸಿ. ಪುರುಳಂ = ದ್ರವ್ಯವನ್ನು ಪಾರ್ದಿರ್ಪರ್ =ನಿರೀಕ್ಷಿಸಿಕೊಂಡಿರುವವರು. ಕೂರ್ಮೆ=ಪ್ರೀತಿ ನೆಱೆವರ್ = ಸಮರ್ಥರಾಗುವರು.

236. ಪರಿಣತಿ = ಪರಿಣಾಮ. ಆರ್ತಪರೇ = ಸಮರ್ಥರಾಗುವರೇ ?

237. ಭಾವಿ = ಮುಂದಣ. ಸಮಂತು = ಚೆನ್ನಾಗಿ. ತಮೋತಿರೇಕದಿಂ = ತಮೋಗುಣದ ಅಧಿಕ್ಯದಿಂದ. ಆವಿರ್ಭವಮಪ್ಪ = ಹುಟ್ಟುವ.

238. ಪಜ್ಜಳಿಪ = ಪ್ರಜ್ವಲಿಸುವ. ಆತಿಸಂಧಾನಂ= ಮೋಸ.

239. ಈಟ್ಟಿಕೊಳ್ವ = ಅಪಹರಿಸುವ. ತೆಱನಂ = ಉಪಾಯವನ್ನು. ಸಮಕಟ್ಟುವ = ಹೊಂದಿಸುವ.

240. ಕಳೇಬರಂ = ದೇಹ. ಬಸಂ = ಸ್ವಾಧೀನ. ನಿಳಿಂಪನಿಳಯಮುಂ = ಸ್ವರ್ಗವೂ : ನಿಳಿಂಪ = ದೇವತೆಗಳ, ನಿಳಯ = ಸ್ಥಾನ.

241. ಪುಚ್ಚಟಿ = ಕೇಡು. ಇನಿಸುಂ = ಸ್ವಲ್ಪವೂ.

242. ಎತ್ತಾನುಂ = ಎಲ್ಲಿಯಾದರೂ. ಸಮನಿಸುವೊಡೆ = ಉಂಟಾಗುವುದಾದರೆ.

243. ಇರ್ಕೆ = ಇರಲಿ. ಸಕ್ಕಿ = ಸಾಕ್ಷಿ. ಬೇವಸ = ದುಃಖ, ಚಿಂತೆ.

244. ಅವಿಸಂವಾದಂ = ಅವಿರೋಧ. ಗೆಡೆಗೊಳ್ವಂತುಟು = ಹೊಂದಿಕೆಯಾಗುವಂತೆ.

245. ಪೊರ್ದುಗೆ = ಹೊಂದಿಕೆ. ಅದಂಭದಿಂ = ನಿರ್ವಂಚನೆಯಾಗಿ. ನನ್ನಿವೆಡಂಗರ್ = ಸತ್ಯಶೀಲರು

246. ಒಂದಿಸುಗುಂ = ಉಂಟುಮಾಡುವುದು. ಸಾರ = ಶ್ರೇಷ್ಠವಾದ.

249. ತಗುಗುಮೆ = ತಕ್ಕುದೇ, ಉಚಿತವೇ. ಬಗೆಯಿುರುಳಂ = ಹೃದಯುಂಧಕಾರವನ್ನು. ತೊಟ್ಟಗೆ = ಆಗಲಿ.

250. ನಿಗಮ = ವೇದ. ನಯ = ನೀತಿ. ನಿಗದಿಸುಗುಂ = ಉದ್ಘೋಷಿಸುವುವು. ನಿಕ್ಕುವಮುಂ = ಸತ್ಯವನ್ನು.

251. ಮೂಡಲ್ಕೆ = ಹುಟ್ಟಲು. ಉಡಿವನೆ = ಅಡಗಿಸುವನೇ. ನಾಡೆಯುಂ = ವಿಶೇಷವಾಗಿ.

252. ಕತಿ = ಕೋಪ. ಮೆಲ್ಲಿದರೊಳ್ = ಶಕ್ತಿಹೀನರಲ್ಲಿ. ಪಾಸಟಿ=ಸಮಾನ. ತಲ್ಲಣ= ದುಃಖ, ತಾಪ.

253. ಅನರ್ಥಂ = ಕೇಡು. ಜಾಲ = ಸಮೂಹ, ಬಲೆ. ಕಳೆಯುವೇಟ್ಪುದು = ಕಳೆಯಬೇಕು.

254. ಮಿಱುಗುವ = ಪ್ರಕಾಶಿಸುವ. ಕನಲ್ಕೆ = ಕೋಪ.

256, ಇರ್ಕೆದಾಣಂ =ವಾಸಸ್ಥಾನ. ತಚ್ಚಿಂತಾ........ರಂ = ಅವರ ಚಿಂತೆಯೆಂಬ ಸಮುದ್ರಕ್ಕೆ ಹಡಗಿನೋಪಾದಿ ಇರುವವರನ್ನು. ಆಶ್ರಯಾಶಂ = ಬೆಂಕಿ.

257 ಮೋದಲೊಡಂ = ಗುದ್ದಲು, ಹೊಡೆಯಲು. ಏರ್ಪೆತ್ತಪುದು = ಗಾಯವನ್ನು ಹೊಂದುವುದು. ಲಯಂಬಡೆವಂ = ನಾಶವಾಗುವನು.

258. ಮಿಳ್ಳಿಸುವ = ನೆಗೆವ. ಶಿಖೆ = ಜ್ವಾಲೆ. ದಳ್ಪ = ಜ್ವಲಿಸುವ. ಆಳುರ್ದಂತೆ = ಆವರಿಸಿದಂತೆ. ಅಳ್ಳಿಱಿದು = ನಡುಗಿಸಿ. ಅಲಿಲ್ಚಿಯುಂ = ದುಃಖಪಡಿಸಿದರೂ.

259. ಕಿನಿಸು = ಕೋಪ. ವಲ್ಲರಿ = ಲತೆ. ಒಗುಮಿಗೆ ಯಿಂ = ವಿಶೇಷವಾಗಿ.

260. ಮೃತರನ್ನರ್ = ಸತ್ತವರಂತೆಯೇ. ಅಮರರ ನ್ನರ್ = ಸಾವಿಲ್ಲದ ದೇವತೆಗಳಂತೆಯೇ.

261. ಅರಿದೆನಿಪ = ದುರ್ಲಭವಾದ. ಅಣಿಮಾದಿಸಿದ್ಧಿ = ಅಣಿಮೆ, ಗರಿಮೆ, ಲಘಿಮೆ, ಮಹಿಮೆ, ಪ್ರಾಪ್ತಿ, ಪ್ರಾಕಾಮ್ಯ, ಈಶಿತ್ವ ವಶಿತ್ವ ಎಂಬ ಅಷ್ಟಸಿದ್ಧಿಗಳು. ಆಗ = ಆಗದು. (ಶ. ಶಾ. ಸೂ. 554) ಅದಂ = ಪರಪೀಡನವನ್ನು. ತಱಸಲವು = ನಿಶ್ಚಯ, ತೀರ್ಮಾನ.

262. ಉದ್ವೇಗಂ = ತಾಪ. ಮಾಯ್ಗೆ = ಪ್ರತಿಯಾಗಿ. ಪೊಲ್ಲಕೆಯ್ಯರ್ = ಕೇಡನ್ನು ಮಾಡರು.

263. ಲೋಗರ್ = ಇತರರು. ಪೊಲ್ಲಮೆ = ಕೇಡು. ಆಗಸ್ಕರಂ = ಅಪರಾಧಿ. ಇರಲೆಡೆ = ವಾಸಸ್ಥಾನ.

264. ಮಸಗುತೆ = ರೇಗುತ್ತ. ಒಸೆದು = ಒಲಿದು. ಅನುನಯ........ಳಂ = ಸಮಾಧಾನೋಕ್ತಿಗಳನ್ನು.

265. ಆವಂದದೊಳಂ = ಯಾವರೀತಿಯಲ್ಲಿಯೂ. ಏವಾಶ್ತೆ = ಏನುಪ್ರಯೋಜನ ?

266. ತನ್ನಯ = ತನ್ನ. ಅನುಮಿತಿ = ಊಹೆ.

267. ಎಸಕಮಂ = ಕೆಲಸವನ್ನು. ಇನಿಸಾನುಂ = ಸ್ವಲ್ಪವಾದರೂ. ಉದಾತ್ತ = ಶ್ರೇಷ್ಠವಾದ.

269. ಮುಂಬಗಲ್ = ಪೂರ್ವಾಹ್ಣ. ಮುಂಬರಿದು = ಮುಂದಕ್ಕೆಹೋಗಿ. ಅದವಟಲಂ = ದುಃಖವನ್ನು. ಪಿಂಬಗಲ್ = ಅಪರಾಹ್ಣ. ಒತ್ತಂಬದಿಂ = ಬಲಾತ್ಕಾರವಾಗಿ. ಮನಕತ = ಸಂತಾಪ, ಮನಃಕ್ಷತ (ಸಂ).

270. ಅಂಡಲೆ = ಬಾಧಿಸು. ನರರಂ ದುಃಖಂಗಳ್ ಅಂಡಲೆವುದಱಿಂ= ಎಂದನ್ವಯವು.

271. ತಿರುಳ್ = ಸಾರಾಂಶ. ಅಗ್ಗಳದ ಅಘಂ = ಮಹಾಪಾಪ. ಅಳುಂಬಮಪ್ಪಿನೆಗಂ = ಹೆಚ್ಚಾಗುವಂತೆ.

272. ಉಣಿಸಂ = ಆಹಾರವನ್ನು. ಪಚ್ಚು = ವಿಭಾಗಿಸಿ.

274. ಏಕಾಗ್ರತೆಯಿಂ = ಜಾಗರೂಕತೆಯಿಂದ. ಕಾವುದು (ಕರ್ತೃ). ಏವಂ = ಚಿಂತೆ.

275. ಜನಿ = ಜನ್ಮ. ಹನನಂ = ಕೊಲ್ಲುವುದು. ಕೂರ್ಪಂ = ಎಳೆಸುವವನು.

276. ಜವ = ಯಮ (ಸಂ). ಅಳಱಿಸಲ್ = ಹೆದರಿಸಲು.

277. ತಳ್ತು = ಸಂದಿಸಿ. ಇಱಿವುದಂ = ಕೊಲ್ಲುವುದನ್ನು. ತಱಿದು = ಹೊಡೆದು. ಆಗ = ಆಗದು. (261ನ್ನು ನೋಡಿ).

278. ಇಕ್ಕಿದ = ಕೊಂದ. ಅರೆಬರ್ = ಕೆಲವರು. ಅತಿಜಘನ್ಯಂ = ಅತಿಹೀನ.

279. ಮಳಿನತೆ = ದೋಷ. ನೀಚರ್ ಮಳಿನತೆಯಂ ತಿಳಿಯರ್—ಎಂದನ್ವಯವು.

280. ಕುತ್ತ = ಜಾಡ್ಯ. ಇರಲೆಡೆ = ವಾಸಸ್ಥಾನ. ದುರಂತ = ಕೊನೆಯಿಲ್ಲದ. ಆಭವದೊಳ್ = ಹಿಂದಣಜನ್ಮದಲ್ಲಿ.

281. ಕಲ್ಪುದು = ಕಲಿವುದು. ಸಲೆ = ಚೆನ್ನಾಗಿ. ಕಲವೇಡಿದ = ಕಲಿಯಬೇಕಾದ. ನಲ್ವಿಜ್ಜೆ = ಸದ್ವಿದ್ಯೆ.

282. ಅವಗಮಕೆ = ಜ್ಞಾನಕ್ಕೆ. ಸಾಹಿತಿ = ಸಾಹಿತ್ಯ. ಅವೋಘ = ಫಲಪ್ರದವಾದ. ದ್ವಿತಯಂ = ಎರಡೂ. ಕಣ್ಗಳ್ದಲ್ = ಕಣ್ಗಳೆಸರಿ.

283. ಗಾವಿಲ = ಮೂಢ, ಗ್ರಾಮೀಣ (ಸಂ).

284. ಸಮ್ಮದ = ಸಂತೋಷ, ಹೆಮ್ಮೆ. ಉಮ್ಮಳಿಪಂತೆ = ತಪಿಸುವಂತೆ

285. ಬೇಳ್ಪ = ಬೇಡುವ. ಎರೆಹರ್ = ಬೇಡಿದವರು.

286. ಒಗರಗೆ = ಚಿಲುಮೆ. ಅಗೆವ್ವರ್ = ಅಗೆವರು. ಒಸರ್ಗುಂ = ಸ್ರವಿಸುವುದು. ಬಿತ್ತಿಗರೊಳ್ = ವಿದ್ವಾಂಸರಲ್ಲಿ. ಬಿಜ್ಜೆ = ವಿದ್ಯೆ (ಸಂ). ಪೊಣ್ಮುಗುಂ = ವಿಕಾಸವಾಗುವುದು.

287. ನಾಟ್ಕಳೊಳಂ = ನಾಡುಗಳಲ್ಲಿಯೂ. ಸಾವನ್ನೆವರಂ = ಸಾವವರೆಗೂ. ಕಲ್ಲದೆ = ಕಲಿಯದೆ.

291. ವಿದಿತ.... ರ = ಪ್ರಸಿದ್ಧರಾದ ಪಂಡಿತರ. ಅದಿರದೆ = ಹೆದರದೆ. ಏನಾನುಂ = ಏನಾದರೂ.

292. ಉಸಿರಲ್ = ಮಾತನಾಡಲು. ಆಟಿಪುದು = ಅಪೇಕ್ಷಿಸುವುದು. ಅರಯ್ವಿನೆಗಂ = ಆಲೋಚಿಸಲು.

293. ಅಱಿಯುಮೆ = ಅಜ್ಞಾನ, ಮೌಢ್ಯ. ಮೇಧಾವಿ = ಬುದ್ಧಿವಂತ. ಬರ್ದುಗರ = ಪ್ರೌಢರ, ಪಂಡಿತರ. ಕೆಮ್ಮನೆ = ವ್ಯರ್ಥವಾಗಿ. ಮಾತುಂಗುಟ್ಟದೆ = ಮಾತಾಡದೆ. ಕಲ್ಲದರುಂ = ಅಜ್ಞರೂ.

294. ಘುಣಾಕ್ಷರನ್ಯಾಯದಿಂದೆ = ಘುಣವೆಂಬ ಹುಳು ಮರವನ್ನು ಕೊರೆವಾಗ ಯಾವುದಾದರೂ ಒಂದಕ್ಷರದ ರೂಪವು ಕಂಡಂತೆ. ಅವಿಮರ್ಶಪ್ರಭೂತಂ = ಅವಿಚಾರದಿಂದ ಹುಟ್ಟಿದುದು.

295. ತನತು = ತನ್ನ. ಪಾಸಟಿ = ಸಮಾನ. ಪೊಟ್ಟಳಿಸಿ = ಬೇಗಿ. ಕರಂ = ಹೆಚ್ಚಾಗಿ. ತೊನೆವ = ಅಹಂಕಾರದಿಂದ ತೂಗಾಡುವ. ಕಾಮುಕರಂ = ಗರ್ವ.

296. ಒಳಂ = ಇದ್ದಾನೆ. ನೆಲನನ್ನಂ = ನೆಲದಂಥವನು.

297. ಅನಧಿಗತವಿದ್ಯರ್ = ವಿದ್ಯೆಯನ್ನು ಕಲಿಯದವರು, ಅಜ್ಞರು. ಲೆಪ್ಪದಮನುಜ = ಮಣ್ಣಿನಲ್ಲಿ ಮಾಡಿದ ಮನುಷ್ಯನ ರೂಪ.

299. ನಿರವದ್ಯಂ = ದೋಷರಹಿತ. ಅನ್ವವಾಯ = ವಂಶ. ಪೋಲ್ವೆ = ಸಾಮ್ಯ.

301. ಪಱಿಯಿಸುವ = ಪರಿಹರಿಸುವ. ಒಳ್ಗಿಯ್ದು = ಒಳ್ಳೆಯ ಆಯುಧ. ಮಱುವಸಲರ್ = ಶತ್ರುಗಳು. ಮಾಮಸಕದಿಂ = ಹೆಚ್ಚಾದ ಕೋಪದಿಂದ. ಇಱಿದು = ಇಡಿದು, ಭೇದಿಸಿ.

302. ವಿಸಟಂಬರಿಯಲ್ಕೆ = ಸ್ವೇಚ್ಛಾಪ್ರವೃತ್ತಿಗೆ. ಅಸಾಧು........ದೆ = ದುರ್ಮಾರ್ಗದಿಂದ.

303. ನೇಹಿಗರ್ = ಸ್ನೇಹಿತರು. ನಿಗದಿಸೆಯುಂ = ಹೇಳಿದರೂ. ಎಸಪ್ಪುದೇ = ಮಾಡುವುದೇ.

304. ಗೂಢ = ದುರ್ಬೋಧವಾದ. ನಿರವಿಸಿ = ನಿರೂಪಿಸಿ. ಅರಿದೆನಿಪ = ಅವ್ಯಕ್ತವಾದ. ಆಶಯ = ಭಾವ.

307. ಓರಂತೆ = ಕ್ರಮವಾಗಿ. ಸಾಲ್ವ = ಸಮರ್ಥರಾದ. ನೆಱೆಯದರೆ = ಸಮರ್ಥರಾಗದವರೇ.

308. ಪುಙ್ಖಟಿ = ಕೇಡು. ಬೆಳ್ಕುಱದೆ = ಹೆದರದೆ. ಜೆಱೆವುದು = ಬೀಗುವುದು. ಅಱಿಯವಾ = ಅಜ್ಞಾನ. ಎನಸುಂ = ವಿಶೇಷವಾಗಿ. ಅಟಿವು = ಕೇಡು.

310. ಬಱುವಂ = ಒಳಗೆ ಏನೂ ಸಾರವಿಲ್ಲದವನು, ಪೊಳ್ಳಾದವನು.

311. ತಳ್ಳಂಕಂಗೊಳ್ವರ್ = ಹೆದರುವರು, ನಡುಗುವರು. ಆಟಿಸುವರ್ = ಅಪೇಕ್ಷಿಸುವರು.

313. ಅನುಷಂಗಂ = ಸಹವಾಸ. ವೃತ್ತಿ....ಣ್ಯಂ = ನಡತೆಯಲ್ಲಿ ವ್ಯತ್ಯಾಸವು.

315. ಅಮಲೀಮಸತ್ವಂ = ಶುದ್ಧತೆ, ದೋಷರಹಿತತ್ವ.

317. ಓಲಗಿಸುಗುಂ = ಸೇವಿಸುವುದು. ಕೌಟಿಲ್ಯ = ಕಪಟತೆ, ವಂಚನೆ.

318. ಆಭವದ = ಹಿಂದಣ ಜನ್ಮದ. ಸಯ್ಪಿಂ = ಪುಣ್ಯದಿಂದ, ಸುಕೃತದಿಂದ. ಅಗ್ಗಲಿಕುಂ = ವೃದ್ಧಿಯಾಗುವುದು.

319. ಮಾನಸದ = ಮನಸ್ಸಿನ. ನಲ್ಮೆ = ಶುದ್ಧತೆ. ಒಳ್ಳೆಯತನ. ಮಾನಸರ್ಗೆ = ಮನುಷ್ಯರಿಗೆ. ಅಪವರ್ಗ = ಮೋಕ್ಷ. ಪೀನಂ= ವಿಶೇಷವಾಗಿ. ಅನೀಕ =ಸಮೂಹ.

321. ಅನುದ್ಯೋಗಂ= ಸೋಮಾರಿತನ. ಮಸುಳ್ಗುಂ = ಮಂಕಾಗುವುದು. ವಿಲುಪ್ತಮಕ್ಕುಂ = ಲೋಪವಾಗುವುದು, ನಾಶವನ್ನು ಹೊಂದುವುದು. ಆಲಸ್ಯತಮಂ = ಸೋಮಾರಿತನ ವೆಂಬ ಕತ್ತಲೆ.

322. ಒದವಿಸಲುಂ= ಹೆಚ್ಚಿಸಲೂ. ತಳ್ವದೆ = ಸಾವಕಾಶಮಾಡದೆ. ಒರ್ಮೊದಲ್= ಮೊತ್ತಮೊದಲು.

323. ವೇಟ್ಪ = ಬೇಕಾದ. ಗಾವಿಲ = ಮೂಢ, ಗ್ರಾಮೀಣ (ಸಂ.)

324. ಜಾಲ=ಬಲೆ. ತೊಡರಲ್ಲಿ =ಬಂಧದಲ್ಲಿ ನಿಶ್ಚೇಷ್ಟತೆಯಂ =ಕದಲದೆ ಇರುವಿಕೆಯನ್ನು.

325. ಚಿರಕಾರಿತೆ= ಆಲಸ್ಯ. ಅನವಧಾನಂ =ಗಮನವಿಲ್ಲದಿರುವಿಕೆ. ಇವು ಪಡಂಗು—ಎಂದನ್ವಯವು.

326. ಇಳೆಯಂ=ಭೂಮಿಯನ್ನು. ರತ್ನಾಕರ ........ಯಂ =ಸಮುದ್ರದಿಂದ ಸುತ್ತಲ್ಪಟ್ಟ. ಮಾರ್ಮಲೆವರ್ = ಹಗೆಗಳು. ನಿಸ್ತುಲ= ಅಸದೃಶವಾದ. ಅಲಸುಂಗಾಱಂಗೆ = ಸೋಮಾರಿಗೆ.

327. ನಾಂಬರ್ = ಸೋಮಾರಿಗಳು. ಹಾಲಾಹಲ = ವಿಷ. ಅಲಘು........ಮಂ =ಹೆಚ್ಚಾದ ಹೀಯಾಳಿಕೆಯನ್ನು. ಆಲಿಪರ್ =ಕೇಳುವರು.

328. ಪಾರಂಪರ್ಯದೆ = ಪರಂಪರೆಯಿಂದ. ಪಾರಾವಾರ........ಡಂ= ಸಮುದ್ರದಿಂದ ವೇಷ್ಟಿತವಾದ ಭೂಮಿಗೆಲ್ಲಾ ಒಡೆಯನಾಗಿದ್ದರೂ. ಸಾರಿಕುಂ= ಉಂಟುಮ್ಮಾಡುವುದು.

329. ಜಡತೆ = ಆಲಸ್ಯ. ಪಡಲ್ವಡುಗುಂ= ಕೆಡುವುದು. ದೋಷಂ ಪಡಲ್ವಡುಗುಂ—ಎಂದನ್ವಯವು.

331. ಕೆಳೆತನ = ಸ್ನೇಹ. ಅಸದಳಂ = ಅಸಾಧ್ಯ. ಪಳಂಚುವ = ತಾಗುವ. ಕೋಟಾವಳಯುಂ= ಸುತ್ತುಕೋಟೆ.

332. ಎಳವೆಱೆ = ಬಾಲಚಂದ್ರ. ಕೆಳೆ= ಸ್ನೇಹ. ಪರಿವಿಡಿಯಿಂದೆ = ಕ್ರಮಕ್ರಮವಾಗಿ. ನೆಱೆದಿಂಗಳ್ = ಪೂರ್ಣಚಂದ್ರ.

333 ಕಲೆ ಕಲೆ = ಕಲಿಯಲು ಕಲಿಯಲು. ಕಲೆಯುಂ ಕಲೆ ಕಲೆ— ಎಂದನ್ವಯವು. ಅಲರಿಪ = ವಿಕಾಸಮಾಡುವ. ಸಲೆ ಸಲೆ= ಹೆಚ್ಚಲು ಹೆಚ್ಚಲು. ಅಗ್ಗಲಿಕುಂ = ವೃದ್ಧಿಯಾಗುವುದು.

334. ನರ್ಮಾಲಾಪದಿಂ = ಪರಿಹಾಸವಾದ ಮಾತುಗಳಿಂದ. ಸೌಹೃದ= ಸ್ನೇಹ. ತಗದುದಂ = ಅಯೋಗ್ಯವಾದ ಕೆಲಸವನ್ನು. ಜಡಿದು= ಆಗ್ರಹಿಸಿ. ಮಾಣಿಸಲೆವಲಂ = ಬಿಡಿಸುವುದಕ್ಕೋಸ್ಕರವೇ.

335. ಒಡಲ್ದು= ಪ್ರೀತಿಸಿ. ಭಾವಸಾಮ್ಯಂ = ಮನಸ್ಸುಗಳು ಒಂದಾಗಿರುವುದು. ನೆಱೆಗುಂ = ಸಮರ್ಥವಾಗುತ್ತದೆ.

336. ಬಗೆದಾವರೆಯಲರ್ = ಹೃದಯವೆಂಬ ಕಮಲದ ಹೂ. ಮಲರೆ= ವಿಕಾಸವನ್ನು ಹೊಂದಲು.

337. ಉದ್ವೇಗಮಂ = ಸಂತಾಪವನ್ನು. ಉದ್ವೃತ್ತ

ತೆಯಂ= ಕೆಟ್ಟ ನಡತೆಯನ್ನು. ಕಟಿಲ್ಚಿ =ಹೋಗಾಡಿಸಿ. ನಿಱಿಸಿ= ನಿಲ್ಲಿಸಿ. ಸುಹೃದ್ವರಂ= ಶ್ರೇಷ್ಠನಾದ ಮಿತ್ರನು.

338. ಉಡೆ= ಉಟ್ಟವಸ್ತ್ರವು. ಸಡಿಲಲೊಡಂ =ಬಿಚ್ಚಿ ಹೋಗಲು. ನಾಣಂ= ಗುಹ್ಯಸ್ಥಾನವನ್ನು. ಕಾವ = ಮರೆ ಮಾಡುವ. ದುಗುಡಂ = ದುಃಖ.

339. ಇಕ್ಕಿಮೆಟ್ಟುವರ್ =ನಾಶಮಾಡುವರು. ಅಱಿಕೆ ಆರ್ಮಂ=ಧರ್ಮಕ್ಕೆ ನೆಲೆ.

340. ಎವಗೆ= ನಮಗೆ. ಇನಿತ್ತು ಕೂರ್ತಪರ್ = ಇಷ್ಟು ಪ್ರೀತಿಸುತ್ತಾರೆ. ಆಂ= ನಾವು.

342. ಬೆಳ್ಪನ =ಮೌಢ್ಯ. ಮಱುಮೆಯೊಳ್ =ಮುಂದಣ ಜನ್ಮದಲ್ಲಿ. ಮರುಳಾಗಿ =ಪಿಶಾಚವಾಗಿ.

344. ಕತದಿಂದಂ = ಕಾರಣದಿಂದ. ಜೀವಂದೊಱೆವಂದು= ಪ್ರಾಣವನ್ನು ಬಿಡುವಾಗ.

346. ಮಡಗುವ =ಬಚ್ಚಿಡುವ. ಕುತ್ತಂದಲ್ = ಜಾಡ ವೇಸರಿ.

348. ಏತ್ತ =ದ್ರವ್ಯ. ಇಟ್ಟೆ = ಕಹಿಯಾದ ಹಣ್ಣನ್ನು ಬಿಡುವ ಒಂದು ಮರ, ಕಾಜಿವಾರದ ಮರ. ಅಡಕಿಲ್ಗೊಂಡು = ಜೋಂಪಲು ಜೊಂಪಲಾಗಿ. ಪಾಸಟಿ =ಸಮಾನ.

349. ಕಡೆಗಣಿಸಿ= ಅಸಡ್ಡೆಮಾಡಿ. ಮಱುಗದೆ= ಕರುಣಿಸದೆ.

353. ಜನಿಯಿಸಿದ= ಹುಟ್ಟಿದ. ಅಭಿಜನಕೆ = ಕುಲಕ್ಕೆ. ನಿರ್ಧನತೆ =ಬಡತನ. ಅರಿದು= ಕಷ್ಟ.

355. ಅದವಟಿಲ್ = ದುಃಖ. ಅಟಿಲ್ = ಸಂಕಟ. ಬೆನ್ನನೆ = ಹಿಂದೆಯೇ.

355. ತತಿ = ಸಮೂಹ. ಪರಿಣತಿ = ಪಾಂಡಿತ್ಯ. ಫಣಿತಿ = ಮಾತು. ದುರ್ಗತರ್ = ದರಿದ್ರರು. ದುರ್ಗತರ್ ನುಡಿದೊಡಂ—ಎಂದನ್ವಯವು. ಜೊನ್ನ = ಬೆಳುದಿಂಗಳು, ಜ್ಯೋತ್ಸ್ನಾ (ಸಂ)

357. ನಡಪಿದ = ಸಲಹಿದ. ನಸಿಯಿಪ = ಕೃಶತೆಯನ್ನು ಉಂಟುಮಾಡುವ. ನಿಸ್ಸ್ವತೆ = ದಾರಿದ್ರ್ಯ.

358. ದಂದುಗದೊಳ್ ಅಟ್ಟಿದ = ಪರಿಹಾಸಕ್ಕೆ ಗುರಿಮಾಡಿದ, ದುಃಖದಲ್ಲಿ ಮುಳುಗಿಸಿದ. ನಿನ್ನೆ = ನೆನ್ನೆಯ ದಿವಸ. ಎಡರ್ = ದಾರಿದ್ರ್ಯ.

359. ಇಡುಗಿಚ್ಚು = ಜ್ವಲಿಸುವ ಬೆಂಕಿ. ಎಂತಾನುಂ = ಹೇಗಾದರೂ. ಪಡಲ್ = ಮಲಗಲು. ಏಗೆಯ್ದುಂ = ಏನುಮಾಡಿದರೂ.

360. ಧಿಕ್ಕಾರಂ = ತಿರಸ್ಕಾರ. ನೀರುಪ್ಪು = ಉಪ್ಪಿನ ಕಾಯಿ. ಲಯ = ನಾಶ.

361. ಬೇಡುಗೆ = ಬೇಡಲಿ. ಉದಾತ್ತನಂ = ಉತ್ತಮ ಗುಣವುಳ್ಳವನನ್ನು, ಉದಾರನನ್ನು. ಬೇಳ್ಪ = ಬೇಡುವ.

362. ಎಡರುಂ = ಕಷ್ಟವೂ. ಮನಕತಮುಂ = ಖಿನ್ನತೆಯೂ. ಈಹಿತಮಂ = ಇಷ್ಟಾರ್ಥವನ್ನು.

363. ಎರೆವಗ್ಗೆ = ಯಾಚಕರಿಗೆ. ಬೇಳ್ಪರ = ಬೇಡು

ವರ. ಎರೆವುದುಂ=ಬೇಡುವುದೂ.

364. ವದಾನ್ಯರ = ಉದಾರರ, ತ್ಯಾಗಿಗಳ. ತೊಣೆ = ಸಮಾನ.

365. ಅಭೀಪ್ಸಿತವುಂ= ಇಷ್ಟಾರ್ಥವನ್ನು. ಚಾಗ = ತ್ಯಾಗ (ಸಂ.) ಪೆಂಪಂ = ಆಧಿಕ್ಯವನ್ನು, ಅತಿಶಯವನ್ನು. ಅಸು ನೀಗದೆ= ಪ್ರಾಣವನ್ನು ಬಿಡದೆ.

366. ನಿಸ್ಸ್ವತೆಯ ಅಲಿಲ್ಗಳ್ = ದಾರಿದ್ರ್ಯದ ದುಃಖಗಳು.

368 ಶರನಿಧಿ= ಸಮುದ್ರದಿಂದ. ರಶ್ಮಿಯಿಂ = ಸೂತ್ರದಿಂದ. ಎಡೆಯಾಟ =ಸಂಚಾರ.

369. ಆನಲ್ಕೆ = ಹೊಂದಲು. ಆಟಿಸಿ =ಅಪೇಕ್ಷಿಸಿ. ವಿತರಣದ= ತ್ಯಾಗದ. ಉದ್ದಾನಿಯುಂ= ಅತಿಶಯವನ್ನು.

370. ಆಗಡೆ= ಆಗಲಿ. ಒನಲದಿರ್ಕೆ = ಕೋಪಿಸದೆ ಇರಲಿ. ಮೂಡದು = ಉದ್ಭವಿಸದು.

371. ಪರಿಜಿಂದೆ= ಆಕಾರದಿಂದ. ಎಲ್ಲಂದದೊಳಂ = ಎಲ್ಲಾ ರೀತಿಯಲ್ಲಿಯೂ.

372. ಒಳ್ಪಂ= ಶ್ರೇಯಸ್ಸನ್ನು. ಉಮ್ಮಳಿಸಲ್ವೇಡದಿರ್ಪ = ಚಿಂತಿಸಬೇಕಾಗಿಲ್ಲದಿರುವ.

373. ಪೋಲ್ವೆಗೆ =ಸಾಮ್ಯಕ್ಕೆ. ನಿಯಮಿಪರ್ =ನೇಮಿಸುವವರು.

374. ಸ್ವೈರ = ಸ್ವೇಚ್ಛೆಯಾದ. ಓರಗೆ = ಸಮಾನ. ನೆಗಟ್ಟಿರಂ =ವರ್ತಿಸುವವರನ್ನು. ದೂರೀ........ಥರ್= ದುರ್ಮಾರ್ಗರು. ಆವೆ = ನಾವೆ. ಪಿರಿಯರೆವು = ದೊಡ್ಡವರಾಗಿದ್ದೇವೆ ; ಶ. ಮ. ದ. ಸೂತ್ರ 220.

375. ನಯವಿರಹಿತರ್ = ನೀತಿಯಿಲ್ಲದವರು. ಎಂದಾನುಂ ಯಾವಕೊತ್ತಾದರೂ. ನಿಯಮಮಂ = ಕಟ್ಟನ್ನು, ನಿಬಂಧನೆಯನ್ನು.

376. ಪಱೆಗೆ = ತಮಟೆಗೆ, ಡಂಗೂರಕ್ಕೆ. ಓರಗೆ = ಸಮಾನ.

377. ಕದಪಂ = ಕಪೋಲವನ್ನು, ಕೆನ್ನೆಯನ್ನು. ಬಿದಿರರ್ = ಕೊಡಹುವುದಿಲ್ಲ. ಕೆಯ್ಯುಮಂ=ಕೈಯನ್ನೂ, ಕೆಯ್ಯುಮಂ ಬಿದಿರರ್—ಎಂದನ್ವಯವು. ಅಱಿಯಮೆ = ಅಜ್ಞಾನ. ಎಂತೋ= ಎಂಥದೋ.

379. ಮಿಱುಗುವ=ಹೊಳೆವ. ದುಗುಲ = ದುಕೂಲ (ಸಂ.) ನಱುನೆಯ್ಯಂ = ಸುವಾಸನೆಯುಳ್ಳ ತುಪ್ಪವನ್ನು. ತುಱುಗಿದ=ವ್ಯಾಪ್ತವಾದ. ಕಱುಂಬಿನಿಂದಂ = ಹೊಟ್ಟೆಗಿಚ್ಚಿನಿಂದ. ಪಾರ್ದು= ನಿರೀಕ್ಷಿಸಿಕೊಂಡು.

380. ಎಡರ್= ಸಂಕಟ. ಎತ್ತಾನುಂ = ಎಲ್ಲಿಯಾದರೂ. ಎರ್ದೆಗಿಡುತುಂ=ಅಧೈರ್ಯಪಡುತ್ತ.

---

ತಿರುಳಂ = ಸಾರವಾದ. ಕುಱಳಂ=ಕುಱಳ್ ಎಂಬ ಗ್ರಂಥವನ್ನು. ನೆಗಟ್ಟಿ=ಮಾಡಿ. ತಮಿಳೊಳ್= ತಮಿಳ್ ಭಾಷೆಯಲ್ಲಿ. ಪರೆಯಿಸಿದಂ = ಹರಡಿದನು. ಅಱಿದರ್.......ಎಂಬಿನಂ ಜಸಮಂ ದೆಸೆಗೆಲ್ಲಂ ಪರೆಯಿಸಿದಂ—ಎಂದನ್ವಯವು.

ಕೃತಿರತ್ನ ಖನಿಯೊಳ್ = ಗ್ರಂಥವೆಂಬ ರತ್ನದ ಗಣಿಯಲ್ಲಿ. ಕೌತುಕ= ಕುತೂಹಲ. ಓತು= ಪ್ರೀತಿಸಿ. ಇವಂ = ಈ ರತ್ನಗಳನ್ನು. ಕರ್ಣದೊಳ್ ಅನುಗೊಳಿಕೆ= ಕರ್ಣಾಭರಣವಾಗಿ ಮಾಡಿಕೊಳ್ಳಲಿ, ಕೇಳಲಿ.

ಶೇಷ=ಅನಂತಾರ್ಯರ. ಯತಿಶೇಖರ = ರಾಮಾನುಜಾಚಾರ್ಯರ. ಮರಂದ =ಮಕರಂದ.

---

 ಶ್ರೀಃ 

# ಶುದ್ಧಿ ಪತ್ರ.

| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| 38 | 6 | ತಾಮುಮನ್ಯರೆಡ | ತಾಮುಮನ್ಯರೆಡೆ |
| 39 | 6 | ಮಡುಗು | ಮಡಗು |
| 63 | 4 | ನಱೆಯುದರೆ | ನೆಱೆಯುದರೆ |

## ಟಿಪ್ಪಣಿ.

| | | | |
|---|---|---|---|
| 81 | 21 | ಅಗಳಂ | ಅಗ್ಗಳಂ |
| 83 | 2 | ಸಗೆ | ಸುಗೆ |
| 85 | 18 | (ಸವೀಣಾ) | ವೀಣಾ (ಸಂ). |
| 94 | 20 | ರಸಯಿಂನೆ | ರಸನೆಯಿಂ |
| 96 | 11 | ಅಗಲಿ | ಅಗಲ್ವಿ |
| 100 | 13 | ಉಕೆ | ಉಕ್ಕೆ |
| 102 | 3 | ಪೊಗಡೆ | ಪೊಗಡ್ತೆ |

# Extracts from Opinions on Nitimanjari Parts I and II.

---

## NITIMANJARI, PART I.

I have found many stanzas in it which are admirable in matter and manner.

—Mr. H. V. NANJUNDAIYA, M.A., M.L., C.I.E.

Your Nitimanjari is an excellent work.

—PROFESSOR K. B. PATHAK, B.A.

---

There are thoughts in it so striking and similes so apposite and beautiful that while reading it I have often had to put down the book for a long while to reflect and to admire. You have undoubtedly enriched the Kanarese literature in a way which may well be imitated by those who are content with relating old stories and expressing worn-out ideas by new collocations of words. I know few works which can surpass your stanzas in their mellifluence. If your translation had been composed a century ago, it would to-day have been regarded as a classic, and I have no doubt it will come to be regarded as such by another generation.

—Mr. H. NARAYANA RAO, B.A., B.L.

I was simply overjoyed to read your verses. The chaste style, the natural flow and smoothness and the choice expressions clothing excellent ideas, simply charmed me so much so that I thought for the time being I was reading some of those beautiful original writers of the stamp of Abhinava Pampa and others that preceded him.

—Mr. M. S. PUTTANNA, B A.

---

The Kannada reading public cannot be too thankful to you for your work as it gives them an opportunity of acquainting themselves with the teachings of such a great moralist as Avvaiyar. It gives us much pleasur to see that your work is not marred by any of those defects that generally characterize translations Your verses run smoothly and the language is clear, idiomatic and chaste. In these days it is very rarely that one comes across such a really good book.

Messrs. B. MALLAPPA & S. G. NARASIMHACHAR.

---

This is indeed a valuable contribution to Kannada literature. Its grammatical accuracy and elegant style indicate the high positian the author is likely to occupy among the Kannada poets. We trust that this book, decidedly better than many of its kind now extant in

Kannada, will be read and enjoyed by all the Kannada-speaking people.

—THE EDUCATIONAL REVIEW.

---

ಇದು ಒಳ್ಳೇ ನೀತಿ ಪರವಾಗಿಯೂ ಸುಬೋಧವಾಗಿಯೂ ಉಪದೇಶಪರವಾಗಿಯೂ ಇದ್ದು ಸ್ವಲ್ಪ ಬೆಲೆಗೆ ದೊರೆಯುತ್ತಿರುವುದರಿಂದ ಅದನ್ನು ಯಾವತ್ತರೂ ಸಂಗ್ರಹಿಸುವುದಕ್ಕೆ ಯೋಗ್ಯ ಗ್ರಂಥವಾಗಿರುತ್ತದೆಂದು ನಾವು ಆಗ್ರಹ ಪೂರ್ವಕವಾಗಿ ಸೂಚಿಸುತ್ತೇವೆ

—ವಾಗ್ಭೂಷಣ.

## NITIMANJARI, PART II.

This part of your contribution to Kannada literature is no less valuable than the rest, and I think the Kannada gems into which you have translated the Tamil gems of Tiruvalluvar will be no less enduring and admired than the originals.

—RAO BAHADUR S. MANGESA RAO, B.A.

I have read through some portions and find that it even excels Part I in point of style and sweet flow.

—Mr. B. RAMA RAO, M.A., LL.B.

The elegant and chaste style in which it is written and its diction are thoroughly in keeping with the lofty thought. The notes appended at the end of the book are of great help to students. I hope the book will find its way to all the Vernacular Schools in the Province.

—ANOTHER KANNADA SCHOLAR.

The public of Mysore are indebted to Mr. Narasimhachar for the translation of this masterpiece of Tamil literature. We think that this is the best production of Mr. Narasimhachar and one which entitles him to stand side by side with the greatest of Kanarese poets. It is written in the chaste Jaina style of the classical period of Kannada literature. A better translator of the Kural into Kannada poetry could not be had.

It is a matter for congratulation that Mr. Narasimhachar made it a labour of love and he has eminently succeeded in his instructive and edifying work. It is not only in the field of Kanarese poetry that Mr. Narasimhachar has made a name and fame for himself, but he has also succeeded in establishing a European and American reputation for himself in Archæology as well as in Oriental scholarship. We look upon the 2nd Part of Nitimanjari as a very valuable addition to Kanarese literature.

—SADHVI.

---

ತಮ್ಮ ಕವಿತಾಶೈಲಿಯು ಕೇಳುವವರಿಗೆ ಕರ್ಣಾವತಂಸವಾಗಿರುವುದು ಮಾತ್ರವಲ್ಲದೆ,ತಮ್ಮಿಂದ ರಚಿತವಾದ "ಕವಿಚರಿತೆ", "ನೀತಿಮಂಜರಿ" ಎಂಬೀ ಗ್ರಂಥಗಳೆರಡೂ ನಮ್ಮ ಕರ್ಣಾಟ ಭಾಷಾವನಿತೆಗೆ ನಿತ್ಯ ಸೌಮಂಗಲ್ಯವನ್ನು ಕಾಪಾಡತಕ್ಕ ಎರಡು ಕರ್ಣಕುಂಡಲಗಳಾಗಿರುವುವೆಂದೇ ನನ್ನ ಮುಖ್ಯಾಭಿಪ್ರಾಯವು.

—ಪಂಡಿತ ದೇ. ಅಳಸಿಂಗರಾಚಾರ್ಯರು.

---

ಕರ್ಣಾಟಕ ಭಾಷೆಯ ಪ್ರಾಚೀನತ್ವವನ್ನೂ ಸೊಬಗನ್ನೂ ಪರಿಶೋಧನೆಯಿಂದ ಕಂಡುಹಿಡಿದು ಕನ್ನಡಿಗರಿಗೆ ತೋರಿಸಿ ಆ ಭಾಷಾಸೇವೆಯನ್ನು ಮಾಡಿರುವ ಮಹನೀಯರಾದ ಪಂಡಿತಾಗ್ರೇಸರರಲ್ಲಿ ಮೆ॥ ನರಸಿಂಹಾಚಾರ್ಯರವರು ಪ್ರಥಮಸ್ಥಾನವನ್ನು ಪಡೆದಿರುವರು. ಇವರು ರಚಿಸಿರುವ ಕರ್ಣಾಟಕ ಕವಿಚರಿತೆಯೆಂಬ ಒಂದು ಪುಸ್ತಕದಿಂದಲೇ ಇವರ ಅಪಾರವಾದ ಪಾಂಡಿತ್ಯವೂ ಶೋಧನಾಶಕ್ತಿಯೂ ಮತ್ತು ಇವರು ಕನ್ನಡಿಗರಿಗೆ ಮಾಡಿರುವ ಮಹತ್ತರವಾದ ಉಪಕಾರವೂ ಪ್ರಕಾಶಪಡುತ್ತಿರುವುವು. ಇಂತಹ ಪಂಡಿತೋತ್ತಮರು ಕರ್ಣಾಟಕ ಭಾಷೆಯ ಮೇಲಿರುವ ತಮ್ಮ ಅತಿಶಯವಾದ ಪ್ರೀತಿಯ ದೆಸೆಯಿಂದ "ನೀತಿಮಂಜರಿ"ಯನ್ನು ಬರೆದು ಪ್ರಕಟಿಸಿರುವುದರಿಂದ ಅದು ಅತ್ಯಂತ ಅಮೂಲ್ಯವಾದ ಗ್ರಂಥವೆಂದು ನಿಸ್ಸಂದೇಹ

ವಾಗಿ ಹೇಳಬಹುದಾಗಿದೆ. ನಾವು ಓದಿರುವ ಮತ್ತು ಕೇಳಿರುವ ನೀತಿಬೋಧಕ ವಾದ ಪುಸ್ತಕಗಳ ಪೈಕಿ " ನೀತಿಮಂಜರಿ " ಗೆ ಸರಿಸಮಾನವಾಗಿ ತೂಗುವ ಗ್ರಂಥವು ಬೇರೊಂದಿಲ್ಲವೆಂದು ನಮಗೆ ತೋರುತ್ತದೆ. ಪ್ರತಿ ಶ್ಲೋಕದಲ್ಲಿಯೂ ಸಾಧ್ಯವಾದಷ್ಟು ಸಂಕ್ಷೇಪವಾಗಿರುವ ಭಾಷೆಯಲ್ಲಿ ಅತ್ಯಂತ ವಿಪುಲವಾದ ಅರ್ಥವು ಗರ್ಭೀಕರಿಸಲ್ಪಟ್ಟಿರುವುದು ನಮ್ಮ ಸರ್ಕಾರದವರು ಸರ್ಕಾರಿ ಪಾಠಶಾಲೆಗಳಲ್ಲಿ ನೀತಿಬೋಧನೆಗೆ ಏರ್ಪಾಡು ಮಾಡಿರುವರಷ್ಟೆ. ಇದಕ್ಕೆ ಈ ನೀತಿಮಂಜರಿಯ ಪುಸ್ತಕಗಳನ್ನೇ ಇಟ್ಟು ಉಳಿದ ನಾನಾತರಹೆಯ ಸಾಧಾರಣ ಪುಸ್ತಕಗಳನ್ನು ತೆಗೆದುಹಾಕಿದರೆ ಸರ್ವೋತ್ತಮವಾಗಿರುವುದು.

—ಒಕ್ಕಲಿಗರ ಪತ್ರಿಕೆ.

---

ಉಭಯಭಾಷಾ ಪಂಡಿತೋತ್ತಮರಾದ ಮ॥ ಆಚಾರ್ಯರು ಇದನ್ನು ಕಂದ ಪದ್ಯಗಳಲ್ಲಿ ಬಹು ಮಧುರವಾಗಿಯೂ ಲಲಿತವಾಗಿಯೂ ರಚಿಸಿರುತ್ತಾರೆ. ಇಂಥಾ ಅಮೂಲ್ಯವೂ ರತ್ನಪ್ರಾಯವೂ ಆದ ಪುಸ್ತಕವನ್ನು ಕನ್ನಡಿಗರು ತರಿಸಿ ಓದಿ ಸಂತೋಷಪಡುವರೆಂದು ಹಾರೈಸುತ್ತೇವೆ.

—ವೃತ್ತಾಂತ ಪತ್ರಿಕೆ.

---

ಅಮೂಲ್ಯವಾದ ಈ ಪುಸ್ತಕವು ನಮ್ಮ ಪುಸ್ತಕ ಭಾಂಡಾಗಾರದಲ್ಲಿ ರತ್ನದಂತೆ ಕಾಪಾಡಲ್ಪಡತಕ್ಕದಾಗಿದೆ. ಕರ್ಣಾಟಕ ಭಾಷೆಯನ್ನು ಉದ್ಧರಿಸಿದ ಜೈನ ಕವಿಗಳಿಂದೀಚೆಗೆ ಇಂತಹ ಪ್ರಾಚೀನಶೈಲಿಯ ಅತ್ಯುತ್ತಮ ನೀತಿಪದ್ಯಗಳ ಗ್ರಂಥವನ್ನು ಕಂಡುದು ಈಗಲೇ ಎಂದು ಹೇಳಬಹುದು. ಪದಲಾಲಿತ್ಯ, ಭಾಷಾಶುದ್ಧತೆ, ವಿಷಯ ವಿವೇಚನೆ ಇವುಗಳ ವಿಷಯದಲ್ಲಿ ಬಲು ಚೆನ್ನಾಗಿರುವುದು. ಮಧ್ಯ ವರ್ಗದ ಮೊದಲು ಅತ್ಯಂತ ಪ್ರೌಢವರ್ಗದ ವಿದ್ಯಾರ್ಥಿಗಳವರೆಗೂ ತಿಳಿದುಕೊಳ್ಳಬೇಕಾದ ಎಷ್ಟೋ ವಿಷಯಗಳು ಲೋಕೋತ್ತರವಾದ ನಿದರ್ಶನಗಳಿಂದ ಪ್ರತಿಪಾದಿಸಲ್ಪಟ್ಟಿರುವುವು. ಪ್ರತಿ ಪಾಠಶಾಲೆಯಲ್ಲಿಯೂ ಪ್ರತಿ ಪರೀಕ್ಷೆಯಲ್ಲಿಯೂ ಪ್ರತಿ ವಿದ್ಯಾರ್ಥಿಯಲ್ಲಿಯೂ ಈ ಪುಸ್ತಕವು ಇದ್ದೇ ತೀರಬೇಕೆಂದು ನಾವು ಒತ್ತಿಯೊತ್ತಿ ಹೇಳುವೆವು.

—ಮಧುರವಾಣಿ.